# ಆಲದ ಹೂ

ಇದು ಮೂರು ನಾಲ್ಕು ತಲೆಮಾರುಗಳ ಚರಿತ್ರೆಯಲ್ಲ; ಕಲಾವಿದನೊಬ್ಬನ ಧ್ಯೇಯಪೂರಿತ ಜೀವನದ ಕತೆಯಲ್ಲ. ಒಂದು ಸಂಸಾರದ ಪುರಾಣವಲ್ಲ. ರಾಜಕೀಯ ಕ್ರಾಂತಿಯ ಕಾದಂಬರಿಯಲ್ಲ. ಇದು ಕಾಲೇಜಿನ ಜೀವನದ ಹಿನ್ನೆಲೆಯಲ್ಲಿ ರಚಿಸಲ್ಪಟ್ಟಿರುವ ಗೆಳೆತನದ ಚಿತ್ರಣ.

ಕನ್ನಡ ಸಾಹಿತ್ಯದ ಕಾದಂಬರಿಯ ಕ್ಷೇತ್ರದಲ್ಲಿ 'ಆಲದ ಹೂ' ಹೊಸ ಅಧ್ಯಾಯವನ್ನು ಆರಂಭಿಸಿದೆಯೆಂದು ನಾವು ಭಾವಿಸುತ್ತೇವೆ. ಕಥಾತಂತ್ರ, ಆರಿಸಿರುವ ಕಥಾವಸ್ತು, ಬಳಸಿರುವ ಶೈಲಿ, ಎಲ್ಲವೂ ಕನ್ನಡ ಸಾಹಿತ್ಯಕ್ಕೆ ಹೊಸದು.

ಮುಚ್ಚುಮರೆಯಿಲ್ಲದೆ ಮನಸ್ಸಿನ ಭಾವನೆಗಳನ್ನು ಬಿಚ್ಚಿ ಬರೆದಿರುವುದು ಈ ಕಾದಂಬರಿಯ ವೈಶಿಷ್ಟ್ಯ. ಪೂರ್ವ ಯೌವನದಿಂದ ಪೂರ್ಣ ಯೌವನಕ್ಕೆ ಕಾಲಿಡುವವರೆಗೂ, ವಿದ್ಯಾರ್ಥಿಯೊಬ್ಬನ ಮನಸ್ಸಿನಲ್ಲಿ ನಡೆಯಬಹುದಾದ ಹೊಯ್ದಾಟಗಳು ಇಲ್ಲಿ ಬಹು ಚೆನ್ನಾಗಿ ಹೊರ ಹೊಮ್ಮಿವೆ. ಶ್ರೀನಿವಾಸನಿಗೆ 'ಯಾವ ಹುಡುಗಿಯಾದರೂ ಸರಿ, ಮನಸ್ಸು ತಕ್ಷಣವೇ ಕರಗಿ ನೀರಾಗಿ ಹೋಗುವುದು!' ಮತ್ತು 'ಅವರ ಜತೆಯಲ್ಲಿ ಯಾವಾಗಲೂ ಇರಬೇಕೆನ್ನುವ ಆಸೆ. ಅವರು ತನ್ನೆದುರಿನಲ್ಲಿ ಮತ್ತಾರೊಂದಿಗೂ ಸೇರಕೂಡದು ಎನ್ನುವ ಹುಚ್ಚು ಆಸೆ!' ಈ ರೀತಿ ಯೌವನದ ಕಾವಿನಲ್ಲಿ ಬರುವ ಸಹಜವಾದ ಯೋಚನೆಗಳು ಆ ಕಾದಂಬರಿಯ ದೇಹದಾದ್ಯಂತವೂ ಹರಡಿವೆ.

## ಲೇಖಕರು



ಕನ್ನಡ ಸಾಹಿತ್ಯದ ಎಲ್ಲಾ ರಂಗಗಳಲ್ಲಿಯೂ ದುಡಿಯುತ್ತಿರುವ ಕೆಲವೇ ಲೇಖಕರಲ್ಲಿ ಶ್ರೀಯುತ ಅನಂತನಾರಾಯಣರೂ ಒಬ್ಬರು. ಇಪ್ಪತ್ತಮೂರು ವರ್ಷ ವಯಸ್ಸಿನ ಈ ಯುವಕರು ಈಗಾಗಲೇ ಹನ್ನೆರಡು ಪುಸ್ತಕಗಳನ್ನು ಕನ್ನಡಿಗರಿಗೆ ಕೊಟ್ಟಿದ್ದಾರೆ.

ಬಿ.ಎ., (ಆನರ್ಸ್) ಪದವೀಧರರಾಗಿ, ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಅಧ್ಯಾಪಕರಾಗಿ ಕೆಲಸಮಾಡುತ್ತಿದ್ದಾರೆ. 'ಮುರುಕು ಮಂಟಪ' ಮತ್ತು 'ಪಯಣದ ಹಾದಿಯಲ್ಲಿ', ಇವರು ಬರೆದಿರುವ ಇನ್ನೆರಡು ಕಾದಂಬರಿಗಳು. 'ಬಾಡದ ಹೂ' ಮತ್ತು 'ಉಷಾ ಸ್ವಪ್ನ' ಎಂಬ ಗೀತಾ ಸಂಗ್ರಹಗಳನ್ನೂ ಪ್ರಕಟಿಸಿರುವುದಲ್ಲದೆ, ಮೂರು ಶರತ್ಕಾದಂಬರಿಗಳನ್ನು ಅನುವಾದ ಮಾಡಿದ್ದಾರೆ. ಇತ್ತೀಚೆಗೆ ಶ್ರೀ ಕಾರಂತರ ಕಾದಂಬರಿಗಳನ್ನೆಲ್ಲಾ ವಿಮರ್ಶಿಸಿ ಒಂದು ಗ್ರಂಥವನ್ನು ಪ್ರಕಟಿಸಿದ್ದಾರೆ.

ಇಷ್ಟೇ ಅಲ್ಲದೆ, ಸದ್ಯದಲ್ಲಿ ಇನ್ನೂ ಮೂರು ನಾಲ್ಕು ಪುಸ್ತಕಗಳನ್ನು ಬರೆಯುತ್ತಿದಾರೆ.

ಶಾರದಾ ಸಾಹಿತ್ಯಮಾಲೆಯ ೭-೮ ನೇ ಕಿರಣ

# ಕಾಲಚಕ್ರ

ಲೇಖಕರು :

ಎಸ್. ಅನಂತನಾರಾಯಣ ಬಿ. ಎ. (ಆನರ್ಸ್)



ಪ್ರಕಾಶಕರು :
**ಶಾರದಾ ಪ್ರಕಟನಾಲಯ**
೨೩೯-ಬಿ, ಅರಳೇಪೇಟೆ, ಬೆಂಗಳೂರು-೨

ಮುದ್ರಣ ಇತ್ಯಾದಿಗಳ
ಮೇಲ್ವಿಚಾರಣೆ :
**ಆರ್. ಬಸವರಾಜ್**

ಮುದ್ರಕರು :
**ಎಸ್. ಮುನಿರಾಮಯ್ಯ**
ಲಲಿತಾ ಪ್ರಿಂಟಿಂಗ್ ವರ್ಕ್ಸ್

ಚಿತ್ರರಚನೆ:-
**ಕೆ. ಎಸ್. ರಾಜೀವಲೋಚನಂ**



**ಬೆಲೆ**

**೧—೧೨—೦**

ಪ್ರಥಮ ಮುದ್ರಣ:- ಮಾರ್ಚ್ ೧೯೪೯

# ಅರಿಕೆ

ಹೊಸ ದೃಷ್ಟಿಯ, ಹೊಸ ಬಾಳಿನ, ಹೊಸ ಸಾಹಿತ್ಯವನ್ನು ಕನ್ನಡಿಗರಿಗೆ ಸಲ್ಲಿಸಬೇಕೆಂಬ ಉದ್ದೇಶದಿಂದ ಶ್ರಮಿಸುತ್ತಿರುವ ನಮಗೆ ಈ ಸಾರಿ ಶ್ರೀ ಅನಂತನಾರಾಯಣ ಅವರು ನೆರವಾಗಿದ್ದಾರೆ. ಹೊಸರೀತಿಯ ಈ ಕಾದಂಬರಿ ನಮ್ಮ ಓದುಗರಿಗೆ ಪ್ರಿಯವಾಗುವುದರಲ್ಲಿ ಸಂದೇಹವಿಲ್ಲ. ಪ್ರಥಮ ಪುರುಷ ಏಕವಚನ (ನಾನು) ದಿಂದ ಕಥೆ ನಿರೂಪಿಸಲ್ಪಡುವುದು ಕನ್ನಡ ಕಾದಂಬರಿಗಳಲ್ಲಿ ಇದೇ ಮೊದಲೆಂದು ಹೇಳಬಹುದು.

ಮಾಲೆಯ ೭ನೇ ಕಿರಣವಾಗಿ "**ಎದಿರೇಟು**" ಪ್ರಕಟವಾಗಬೇಕಾಗಿತ್ತು. ಆದರೆ ಹಸ್ತಪ್ರತಿ ಸಕಾಲದಲ್ಲಿ ಸಿದ್ಧವಾಗದೆ, ೮ನೇ ಕಿರಣವಾದ "**ಆಲದ ಹೂ**" ವನ್ನೇ ೭-೮ನೇ ಕಿರಣವಾಗಿ ಪ್ರಕಟಿಸಲಾಗಿದೆ. ಪ್ರಕಟನೆ ಹೆಚ್ಚು ನಾವಕಾಶವಾಗದಿರಲಿ, ಎಂಬ ಉದ್ದೇಶದಿಂದ ಈ ವ್ಯವಸ್ಥೆ ಮಾಡಲಾಗಿದೆ.

ಹೊಸ ವರ್ಷದೊಂದಿಗೆ ನಮ್ಮ ಮಾಲೆಯ ಯೋಜನೆಯನ್ನು ಪುನರ್ವ್ಯವಸ್ಥೆ ಮಾಡಲಾಗಿದೆ. ಇನ್ನುಮುಂದೆ ಉಗಾದಿಯೊಂದಿಗೆ ಮಾಲೆಯ ವರ್ಷಾರಂಭವಾಗಿ, ಕನಿಷ್ಟ ಐದು ಪ್ರಕಟನೆಗಳನ್ನು ಪ್ರತಿ ವರ್ಷವೂ ಕೊಡಬೇಕೆಂದು ನಿರ್ಧರಿಸಲಾಗಿದೆ. ಮೂರನೆಯ ವರ್ಷವಲ್ಲಿ ಪ್ರಕಟವಾಗಲಿರುವ ಪುಸ್ತಕಗಳನ್ನು ಬೇರೊಂದೆಡೆ ಪ್ರಕಟಿಸಲಾಗಿದೆ. ಸದ್ಯದಲ್ಲಿಯೇ ಹೆಚ್ಚಿನ ಮುದ್ರಣ ಸೌಕರ್ಯಗಳು ಒದಗಲಿರುವುದರಿಂದ ಇನ್ನುಮುಂದೆ ನಮ್ಮ ಪ್ರಕಟನೆಗಳು ಸಕಾಲದಲ್ಲಿ ಓದುಗರ ಕೈಸೇರುವುದೆಂಬ ಭರವಸೆಯನ್ನು ನಾವು ಈಗ ಕೊಡಬಲ್ಲೆವು.

ನಮ್ಮ ಹೊಸ ಯೋಜನೆಯು ಯಶಸ್ವಿಯಾಗಬೇಕಾದಲ್ಲಿ ವಾಚಕರ ಸಹಕಾರ ಅತಿಮುಖ್ಯ. ಇದುವರೆಗೂ ಸಹಾನುಭೂತಿಯಿಂದ ಸಹಕರಿಸುತ್ತಾ ಬಂದಿರುವ ನಮ್ಮ ಚಂದಾದಾರರು ಇನ್ನುಮುಂದೆಯೂ ಸಹ

ನಮ್ಮೊಂದಿಗೆ ಹೆಚ್ಚು ಸಹಕಾರವನ್ನು ನೀಡುವುದರ ಬಗ್ಗೆ ನಮಗೆ ಯಾವ ಸಂದೇಹವೂ ಇಲ್ಲ. ಅಂತೆಯೇ ಚಂದಾಹಣವನ್ನು **ಆರು ರೂಪಾಯಿಗೆ** (ಅಂಚೆ ವೆಚ್ಚ ಸೇರಿ) ಹೆಚ್ಚಿಸಿರುವುದನ್ನು ನಮ್ಮ ಚಂದಾದಾರರು ವಿರೋಧಿಸಲಾರರೆಂದು ನಂಬಿದ್ದೇವೆ.

ಕೊನೆಯದಾಗಿ, ನಮ್ಮ ನಿರೀಕ್ಷಣೆಗಿಂತಲೂ ಹೆಚ್ಚು ತಡವಾಗಿ ಪುಸ್ತಕಗಳು ಹೊರಬಿದ್ದಿದ್ದರೂ, ನಮ್ಮಲ್ಲಿ ಕೊಂಚವೂ ಅವಿಶ್ವಾಸ ವ್ಯಕ್ತಪಡಿಸದೆ, ಪೂರ್ಣ ಸಹಕಾರವಿತ್ತ ನಮ್ಮ ಚಂದಾದಾರರಿಗೆಲ್ಲರಿಗೂ ನಾವು ಕೃತಜ್ಞರಾಗಿದ್ದೇವೆ.

ಉಗಾದಿ
೩೦ನೇ ಮಾರ್ಚ್ ೧೯೪೯

ಪ್ರಕಾಶಕರು

# ಮೊದಲ ಮಾತು

ಈ ಕಾದಂಬರಿ ನನ್ನ ಮೂರನೆಯ ಸ್ವತಂತ್ರ ಕಾದಂಬರಿ. ಇದೂ ಒಂದು ಪ್ರಯೋಗ. ಇಂಗ್ಲಿಷ್ ಮತ್ತು ಫ್ರೆಂಚ್ ಸಾಹಿತ್ಯದಲ್ಲಿ ಉತ್ತಮ ಪುರುಷ ಏಕವಚನ (ನಾನು) ದಿಂದ ಆರಂಭಿಸಿದ ಕಾದಂಬರಿಗಳು ಬೇಕಾದಷ್ಟಿವೆ ಕಾದಂಬರಿಯಲ್ಲಿ ಮುಖ್ಯಪಾತ್ರವಹಿಸುವವರಲ್ಲೊಬ್ಬನೇ ಕತೆ ಹೇಳುವುದರಿಂದ ಒಂದೇ ಸಿಲುಸೋಟ ಸಿಗುತ್ತದೆ. ಅವನ ದೃಷ್ಟಿಯಿಂದ ಎಲ್ಲವನ್ನು ನೋಡಿದಂತಾಗುತ್ತದೆ. ಹೆನ್ರಿ ಜೇಮ್ಸ್ (Henry James) ಬಟ್ಲರ್ (Samuel Butler) ಮಾಹಂ (Somerset Maugham) ಮಾರಿಯಾಕ್ (Marriac) ಮುಂತಾದವರು ಈ ರೀತಿಯ ಹಲವಾರು ಕಾದಂಬರಿಗಳನ್ನು ಬರೆದಿದಾರೆ. ಅದೇ ಬಗೆಯ ಪ್ರಯೋಗ ಈ ಕಾದಂಬರಿ· ಕನ್ನಡಕ್ಕೆ ಇದು ಹೊಸತೆಂದು ಹೇಳಬಹುದು. ಇದಲ್ಲದೆ ಈ ಕಾದಂಬರಿಯಲ್ಲಿ ತೆಗೆದುಕೊಂಡಿರುವ ವಸ್ತುವೂ ಹೊಸತು. ಕಾಲೇಜಿನಲ್ಲಿ ಸೇರುವ ವಿದ್ಯಾರ್ಥಿಗಳ ಜೀವನ ರೀತಿಯನ್ನು ಆದರ್ಶವಾಡಿ ಚಿತ್ರಿಸುವುದೇ ರೂಢಿಯಾಗಿದೆ. ಅದಕ್ಕಿಂತಲೂ ಅಲ್ಲಿಯ ಚಿತ್ರವನ್ನು ಇದ್ದಂತೆ ಕೊಡಲು ಪ್ರಯತ್ನ ನಡೆಸಿದರೆ ವಾಸಿ. ಆ ಪ್ರಯೋಗವನ್ನು ಇಲ್ಲಿ ಕಾಣಬಹುದು. ಪೂರ್ವ ಯೌವನದ (adolescence) ವಿಚಾರಗಳು, ಚಂಚಲವೃತ್ತಿ, ಆಸೆ ಆತಂಕಗಳು ಸ್ನೇಹ ಸಂದೇಹಗಳನ್ನು ಇಲ್ಲಿ ಚಿತ್ರಿಸಲು ಯತ್ನಿಸಿದೇನೆ. ಕಾಲೇಜು ಗೆಳೆತನದ ಒಂದು ಮುಖದ ಚಿತ್ರಣ ಇದು. ಇದರ ಸೋಲು ಗೆಲವನ್ನು ಸಹೃದಯ ಓದುಗರೇ ನಿರ್ಣಯಿಸಬೇಕು.

ಇದನ್ನು ಬರೆಯುವಲ್ಲಿ ನನಗೆ ಪೂಜ್ಯ ವಿ. ಸೀ. ಯವರ ಮತ್ತು ಹಿರಿಯ ಗೆಳೆಯ ಎ. ಎನ್. ಮೂರ್ತಿರಾಯರ ಬೆಂಬಲ, ಉತ್ಸಾಹ ಸಿಕ್ಕಿದೆ. ನನ್ನಲ್ಲಿ ಮಮತೆಯಿಟ್ಟ ಅವರಿಬ್ಬರ ವಾತ್ಸಲ್ಯಕ್ಕೆ ನಾನು ಚಿರಋಣಿ. ಎಂದಿನಂತೆಯೇ ನನ್ನ ಗೆಳೆಯರು ಟೀಕೆಯಿಂದ, ನಗೆಯಿಂದ, ತಪ್ಪು ತಿದ್ದಿದಾರೆ. ಸಹನೆ ತೋರಿದಾರೆ. ಅವರ ಗೆಳೆತನದ ಹೊಳೆಯ

ಅಮೃತದಲ್ಲಿ ಮಿಂದವನು ಈ ಕಾದಂಬರಿಯನ್ನು ಅವರಿಗೇ ಅರ್ಪಿಸಿದೇನೆ.

ಈ ಕಾದಂಬರಿಯಲ್ಲಿ ಬರುವ ಘಟನೆಗಳಾಗಲಿ, ವ್ಯಕ್ತಿಗಳಾಗಲಿ ಯಾರನ್ನೂ ಉದ್ದೇಶಿಸಿ ಬರೆದುದಲ್ಲವೆನ್ನುವುದು ವಾಡಿಕೆಯಾಗಿಬಿಟ್ಟದೆ. ಹಾಗೆ ಹೇಳಬೇಕಾದ ಕಾಲ ಹೋಗಲಿ. ಕಾದಂಬರಿಯಲ್ಲಿ ಕನ್ನಡಿಯನ್ನು ಕಾಣುವ ತಪ್ಪನ್ನು ಜನ ಮಾಡದಿರಲಿ ಎಂದು ಹಾರೈಸುತ್ತೇನೆ. ಎಲ್ಲ ಕಾದಂಬರಿಗಳಂತೆಯೇ ಇದು ಕೂಡ ನಡೆದ, ನಡೆಯುತ್ತಿರುವ ಮತ್ತು ನಡೆಯಬಹುದಾದ ವಿಷಯದ ಆಧಾರದ ಮೇಲೆ ನಿಂತಿದೆಯೆಂದು ಹೇಳ ಬಲ್ಲೆ. ನನ್ನ ಬರಹಗಳ ಬಗ್ಗೆ ಕನ್ನಡಜನ ಈವರೆಗೆ ತೋರಿದ ಆದರ, ಸಹನೆಗಳಿಗೆ ಇದೂ ತಕ್ಕುದಾಗಿದೆಯೆಂದು ನಂಬಿದೇನೆ.

**ಸ್ವಾತಂತ್ರ್ಯದಿನ**
೧೫—೮—೧೯೪೮
ಮಹಾರಾಜಾ ಕಾಲೇಜು,
ಮೈಸೂರು.

ಎಸ್. ಅನಂತನಾರಾಯಣ.

ಗೆಳೆತನ ಆಲದ ಹೂವಲ್ಲ ಮಲ್ಲಿಗೆಯೆಂದು ತೋರಿಸಿಕೊಟ್ಟ
ಗೆಳೆಯರಿಗೆ

"ಸ್ವರ್ಗದೊಳಗೀ ಸ್ನೇಹ ದೊರೆವುದೇನು ?
ಈ ಪರಿಯ ಸೌಹಾರ್ದಕೆಳೆಯ ವೈಭವವು ?
ಇಲ್ಲದಿರೆ ಎನಗಿಲ್ಲೆ ನೂರು ಜನ್ಮಗಳಿರಲಿ
ಎಲ್ಲ ಪರಿ ಮಮತೆಗಳ ಸತ್ಯಜೀವನವು !"

—ವಿ. ಸೀ.

# ಲೋಲಾಕು

ನಾನು ಮೊದಲನೆಯಸಾರಿ ಅವನನ್ನು ಕಂಡುದು ರಂಗಭೂಮಿಯ ಮೇಲೆ. ನಮ್ಮಿಬ್ಬರ ಪರಿಚಯ ಹಾಗೆ ಆರಂಭವಾದುದರಲ್ಲಿ ಏನೋ ಇರಬೇಕು ಎಂದು ಈಗ ಅನಿಸಿದೆ. ಕಾಲ ನಮ್ಮ ಮೇಲೆ ಹೂಡುವ ಮಂತ್ರ ಮಾಟಗಳಲ್ಲಿ ಇದು ಕೂಡ ಒಂದಿರಬಹುದೋ ಏನೋ! ಆ ದಿನ ಯಾವ ನಾಟಕವಾಗುತ್ತಿತ್ತೋ ನನಗೆ ಚೆನ್ನಾಗಿ ನೆನಪಿಲ್ಲ. ಕೈಲಾಸಂ ಬರೆದುದು ಇರಬೇಕು. ಆದರೆ ಅವನು ರಂಗಭೂಮಿಯ ಮೇಲೆ ಬಂದು ನಿಂತ ದೃಶ್ಯ ಮಾತ್ರ ಇನ್ನೂ ಕಣ್ಣಿಗೆ ಕಟ್ಟಿದಂತಿದೆ. ಅವನು ಉಟ್ಟಿದ್ದ ಸೊಗಸಾದ ಧರ್ಮಾವರದ ಸೀರೆ, ಹಣೆಯಲ್ಲಿ ಕಂಡೂ ಕಾಣದಂತಿದ್ದ ಕುಂಕುಮ, ಕಿವಿಗಳೆರಡರಲ್ಲೂ ಮಿರುಗುವ ಚಮಕಿಯ ಕಾಗದದ ಓಲೆ, ತೂಗುಬಿಟ್ಟ ಎರಡು ಬಿಲ್ಲಿನಾಕಾರದ ಲೋಲಾಕುಗಳು! ಸೊಗಸಾಗಿ (ಟೋಫನಿನಲ್ಲಿ) ಹೆರಳು ಹಾಕಿಕೊಂಡು ಮುಗಮುಗಿಸುವ ಮಲ್ಲಿಗೆಯ ಹೂವನ್ನು ಮುಡಿದುಕೊಂಡು ಬಂದಾಗ ನಿಜವಾಗಿ ಯಾವಳೋ ಸುಂದರ ಯುವತಿಯೇ ನಿಂತಂತಾಗಿತ್ತು. ಯೌವನದ ಹೊಸಲಲ್ಲಿ ಕಾಲಿಡುತ್ತಿರುವ ಯುವತಿಗಿಂತ ಸುಂದರನಾಗಿ ತೋರಿದ. ಇದು ನನ್ನೊಬ್ಬನ ಅಭಿಪ್ರಾಯ ಮಾತ್ರವಲ್ಲ. ಆ ದಿನ ನಾಟಕ ನೋಡಲು ಕಾಲೇಜಿನ ಅಂಗಳದಲ್ಲಿ ಸೇರಿದ್ದ ಸಾವಿರ ಜನ ಹುಡುಗರ ಅಭಿಪ್ರಾಯವೂ ಅದೇ! ಕಾಲೇಜಿನಲ್ಲಿ ತಮಗಿಂತ ಸುಂದರಿಯರು ಇನ್ನಾರೂ ಇಲ್ಲ, ತಾವೇ ಅಪ್ಸರೆಯರೆಂದುಕೊಂಡು ಕೆಲವು ಹೆಣ್ಣುಮಕ್ಕಳು ಹೆಡಸಿನಿಂದ ತಿರುಗಾಡುತ್ತಾರೆ. ನಾನೇನೋ ಅಪ್ಸರೆಯರನ್ನು ನೋಡಿಲ್ಲ. ಆದರೆ ಇಷ್ಟು ಮಾತ್ರ ಹೇಳಬಲ್ಲೆ. ಆ ದಿನ ಅವನ ರೂಪನ್ನು ಕಂಡು ಕಾಲೇಜಿನ ಹುಡುಗಿಯರೆಲ್ಲ ಹೊಟ್ಟೆಯುರಿದುಕೊಂಡರು. ನಾಟಕದ ವಿಚಾರವಾಗಿ ಮರುದಿನ ಹುಡುಗಿಯರ ತಂಡ ಮಾತನಾಡಿಕೊಳ್ಳುತ್ತಿದ್ದುದು ನನ್ನ ಕಿವಿಗೆ ಬಿತ್ತು—

'ಲೇ, ವಿಶಾಲಾಕ್ಷಿ ನಿನ್ನೆಯ ನಾಟಕದಲ್ಲಿ ಅಬ್ಬಾ—'

'ಎಲ್ಲರಿಗಿಂತ ಸೊಗಸಾಗಿ ಪಾರ್ಟು ಮಾಡಿದ್ದೆಂದರೆ—'

'ಅಯ್ಯೋ! ನಾನು ಬರಲೇ ಇಲ್ಲ ಕಣೇ ಸರೋಜ, ನನಗೆ ಮನೆಯಲ್ಲಿ—'

'ನಿನಗೆಲ್ಲಿ? ಮನೆಯಲ್ಲಿ ಪತಿದೇವರ ಸೇವೆಯಲ್ಲೇ—'

'ಅಲ್ಲಕಣೇ. ನೀನು ಬಹಳ ಚೆನ್ನಾದ *Chance* ಕಳಕೊಂಡೆ. ಆ ಕೊನೆಯ ದೃಶ್ಯದಲ್ಲಿ, ಅಬ್ಬಾ! ಏನು *Marvellous acting*! ಎಷ್ಟು ಸೊಗಸಾಗಿತ್ತು!'

'ಯಾರೇ? ಯಾರೇ? ಹೇಳೇಮ್ಮ—'

'ಅವನೇ ಕಣೇ!— ನಾ ಹೇಳೋಲ್ಲಮ್ಮ- ಆ ಮೇಲೆ- ನೀನು- ಮದುವೆಯಾದವಳು--'

'ಥೂ ಹೋಗೇಮ್ಮ! ಯಾರು ಹೇಳೇಂದ್ರೆ-'

'ಅಗೋ ಅಲ್ಲಿ ನೋಡು-ಆ ಮೂಲೆಯಲ್ಲಿ ಬಿಳಿಯ ಕೋಟು ಹಾಕಿಕೊಂಡು--'

'ಓಹ್, ಅವನೇ! ಯಾವಾಗಲೂ ಅವನಿಗೆ ಹೆಂಗಸಿನ ಪಾತ್ರ ಚೆನ್ನಾಗಿ ಒಪ್ಪುತ್ತೆ'

ಹೆಂಗಸರಿಂದ, ಅದೂ ಕಾಲೇಜು ಹುಡುಗಿಯರಿಂದ ಹೊಗಳಿಸಿಕೊಳ್ಳಬೇಕಾದರೆ, ಅವನ ಪಾತ್ರ ಎಷ್ಟು ಚೆನ್ನಾಗಿದ್ದಿರಬೇಕು! ತುಂಬುಮುಖ, ನಕ್ಕರೆ ಕೆನ್ನೆಯಲ್ಲಿ ಬೀಳುವ ಹಾಲುಗುಳಿಗಳು, ಸುಮಾರಾಗಿ ಅಗಲವಾದ ಬೊಗಸೆಗಣ್ಣುಗಳು, ಆ ಕಣ್ಣಿನಲ್ಲಿ ಹೆಣ್ತನದ ನಗೆ. ಆ ನಗೆಯನ್ನು ಹೀಗೆಯೇ ಎಂದು ವರ್ಣಿಸುವುದು ಕಷ್ಟ. ಯೌವನದಲ್ಲಿ ಹುಡುಗಿಯರ ಕಣ್ಣಿನಲ್ಲಿ ಕಾಣುವ ಹೂವುನಗೆ ಅದು. ಮನಸ್ಸನ್ನು ಹತ್ತಿರ ಸೆಳೆಯುವ ಆಕರ್ಷಕ ನಗೆ! ನೀಟಾದ ಮೂಗು. ಕೊಂಚ ಕೆಂಪಾದ ತುಟಿಗಳು. ಆ ತುಟಿಗಳಲ್ಲಿ ದೂರದ ನೋಟಕ್ಕೆ ಒಂದು ಸಮತೆ ಇತ್ತು. ಹೆಣ್ಣಾಗುವ ಬದಲಿಗೆ ಗಂಡಾಗಿ ಹುಟ್ಟಿದ ಇವನು ಎನ್ನುವಂತಿತ್ತು.

ನಾಟಕ ಅರ್ಧ ಆಗುತ್ತಿರುವಾಗ ಇದ್ದಕ್ಕಿದ್ದ ಹಾಗೆಯೇ ದೀಪ ಆರಿಹೋಯಿತು. ದೀಪ ಆರಿದೊಡನೆಯೇ ಒಳಗೆಲ್ಲ ಗಲಿಬಿಲಿ. ಹುಡುಗರೆಲ್ಲ ಗಲಾಟೆಮಾಡಲಾರಂಭಿಸಿದರು. ಸಿಳ್ಳೆಹಾಕುವುದು, ಸಿಕ್ಕಿದಂತೆ ಅರಚಿಕೊಳ್ಳುವುದು, ಒಬ್ಬರನ್ನೊಬ್ಬರು ತಳ್ಳುವುದು ಆರಂಭವಾಯಿತು. ಅಲ್ಲೊಬ್ಬರು ಇಲ್ಲೊಬ್ಬರು ತಮ್ಮ ಕೈಯ್ಯಲ್ಲಿದ್ದ 'ಬ್ಯಾಟರಿ'ಯನ್ನು ಹುಡುಗಿಯರ

ಕಡೆ ತಿರುಗಿಸಿ ಬೆಳಕು ಚೆಲ್ಲಿದರು. ನಾಟಕ ಅಲ್ಲಿಗೇ ನಿಂತಿತು. ಹುಡುಗರು ನೂಕು ನುಗ್ಗಲಲ್ಲಿ ಒಬ್ಬರ ಮೇಲೊಬ್ಬರು ಬೀಳುತ್ತಿದ್ದರು. ಹೆಣ್ಣು ಮಕ್ಕಳಿರುವ ಕಡೆಗೆ ಹೋಗಿ ಕೊಂಚ ಮೈತಾಕಿಸಿಕೊಳ್ಳುವ ಆಸೆ ಕೆಲವರಿಗೆ. ಈ ಗಲಭೆಯಲ್ಲಿ ಹೊರಕ್ಕೆ ಹೋಗುವುದೂ ಬಹಳ ಕಷ್ಟವಾಗಿತ್ತು. ನಾನೇನೋ ಬಾಗಿಲಿಗೆ ಕೊಂಚ ಹತ್ತಿರದಲ್ಲೇ ನಿಂತಿದ್ದುದರಿಂದ ಸುಲಭವಾಗಿಯೇ ಹೊರಕ್ಕೆ ಬಂದೆ. ಆದರೂ ಕೊಂಚ ಪ್ರಯಾಸವೇ ಆಯಿತು.

ಒಳಗೆ ಬೇಕಾದಷ್ಟು ಜಾಗವಿದ್ದರೂ ಬಾಗಿಲ ಬಳಿಯಲ್ಲಿ ನಿಲ್ಲುವುದು ನಮ್ಮಲ್ಲಿ ಬಹಳ ಜನರಿಗೆ ಅಭ್ಯಾಸ. ಕೆಲವರು ಇದನ್ನು ಬೇಕೆಂತಲೇ ಮಾಡುತ್ತಾರೆ. ಹೊತ್ತಾಗಿ ಬಂದವರು ಒಳಗೆ ಹೋಗುವಾಗ ಎಲ್ಲಿ ಉಳಿದವರಿಗೆ ತೊಂದರೆಯಾದೀತೋ ಎಂದು ಹೊರಗೆ ನಿಲ್ಲುವರು. ನಾಲ್ಕು ನಿಮಿಷ ನಿಂತು ಹೊರಟು ಹೋಗೋಣವೆಂದು ಕೆಲವರು ನಿಂತಿರುತ್ತಾರೆ. ಬೇಸರವಾದೊಡನೆಯೇ ಯಾರಿಗೂ ತಿಳಿಯದಂತೆ ಹೊರಟು ಹೋಗಲು ಇದು ಬಹಳ ಅನುಕೂಲವೆಂದು ಕೆಲವರು ಬಾಗಿಲ ಬಳಿ ನಿಲ್ಲುವುದುಂಟು. ಆದರೆ ಈ ಮೂರು ತಂಡಗಳಿಗಿಂತ ಇನ್ನೊಂದು ಜಾತಿಯದೇ ಜೋರು ಹೆಚ್ಚು. ಬಾಗಿಲ ಬಳಿ ನಿಂತರೆ ಹೀಗೂ ಅನುಕೂಲ, ಹಾಗೂ ಅನುಕೂಲವೆಂದು ಈ ಗುಂಪಿನ ಯೋಚನೆ. ನಾಟಕವೂ ಕಾಣುತ್ತದೆ. ಜತೆಗೆ ಮುಂದಿನ ಸಾಲುಗಳಲ್ಲೇ ಕುಳಿತ ಹುಡುಗಿಯರೂ ಕಾಣುತ್ತಾರೆ. ಯಾರಾದರೂ ಹೆಣ್ಣು ಮಕ್ಕಳು ಹೊತ್ತು ಮಾಡಿಕೊಂಡು ಬಂದರೆ ಅವರು ತಮ್ಮ ಮಧ್ಯದಲ್ಲೇ ಹಾದುಹೋಗಬೇಕು. ಆಗ ಬಹಳ ಸಾಮೀಪ್ಯ ದರ್ಶನ ಸಿಕ್ಕುವುದೆಂಬ ಆಸೆಯಿಂದ ಈ ಗುಂಪಿನವರು ಅಲ್ಲಿ ನಿಲ್ಲುತ್ತಾರೆ. ನಾನೂ ಅದೇ ಆಸೆಯಿಂದಲೇ ಅಲ್ಲಿ ನಿಂತಿದ್ದೆನೆಂದರೆ ತಪ್ಪಾಗದು. ಅಂತೂ ಈ ಗುಂಪಿನಿಂದ ತಪ್ಪಿಸಿಕೊಂಡು ಹೊರಕ್ಕೆ ಬಂದು ಗಾಳಿಗೆ ಮೈಯೊಡ್ಡಿ ನಿಲ್ಲುವ ವೇಳೆಗೆ ಆರಿಹೋಗಿದ್ದ ದೀಪ ಮತ್ತೆ ಬಂತು.

ದೀಪ ಬಂದೊಡನೆಯೇ ಸಭೆ ಮತ್ತೆ ಸಮಾಧಾನಕ್ಕೆ ಬಂತು. ನಾಟಕ ಪುನಃ ಆರಂಭವಾಗಿ ಮುಂದುವರಿಯಿತು. ನನ್ನ ಮನಸ್ಸಿನ ಪಾಡು ವಿಪರೀತವಾಗಿತ್ತು. ನಾಟಕವನ್ನು ಪೂರ್ತಿಯಾಗಿ ನೋಡುವ ಆಸೆ. ಗುಂಪಿನ ಮಧ್ಯೆ ನುಸುಳಿಕೊಂಡು ಒಳಕ್ಕೆ ಹೋಗಲು ತ್ರಾಣವಿಲ್ಲ. ಹೊರಗಿ

ನಿಂವಲೇ ನೋಡೋಣವೆಂದರೆ ಬಾಗಿಲ ತುಂಬಾ ಜನ ಕಿಕ್ಕಿರಿದಿದ್ದರು. ಬಾಗಿಲ ಪಕ್ಕದಲ್ಲಿ ಮೇಜು ಹಾಕಿಕೊಂಡು ಆದರ ಮೇಲೆ ಆರೇಳು ಜನ ನಿಂತಿದ್ದರು. ಮೆಟ್ಟಿಂಗಾಲು ನಿಂತರೂ ನನಗೆ ರಂಗಭೂಮಿಯ ತಲೆ ಕಟ್ಟಿನ ಹೊರತು ಮತ್ತೇನೂ ಕಾಣುತ್ತಿರಲಿಲ್ಲ. ನಾನೇನೂ ಕುಳ್ಳಲ್ಲ ದಿದ್ದರೂ ಅಂತಹ ಎತ್ತರವೂ ಇಲ್ಲ. ಏನು ಮಾಡಲಿ? ನಾಟಕ ಸೊಗ ಸಾಗಿತ್ತು. ಮನಸ್ಸಿಗೆ ಹಿಡಿದಿತ್ತು. ಅದರಲ್ಲಿಯೂ ಅವನ ಪಾತ್ರವಂತೂ ನಾಟಕಕ್ಕೇ ಕಳೆಕಟ್ಟುವಂತಿತ್ತು. ಅದನ್ನು ಅರ್ಧನೋಡಿ ಹಾಗೆಯೇ ಹೋಗಲು ಮನಸ್ಸೊಪ್ಪಲಿಲ್ಲ. ಅಲ್ಲಿಯೇ ನಿಂತರೆ ಮುಂದೆ ನಿಂತವರ ಬೆನ್ನಿನ ಹೊರತು ಮತ್ತೇನೂ ಕಾಣುತ್ತಿರಲಿಲ್ಲ. ಕೊನೆಗೆ ಏನಾದರೂ ಆಗಲಿ, ನಾಟಕರಂಗದ ಪಕ್ಕದ ಕೋಣೆಯಲ್ಲಿ— ಬಣ್ಣ ಹಚ್ಚಿಕೊಳ್ಳುವ ಕೋಣೆಯಲ್ಲಿಯಾದರೂ ನಿಂತು ನೋಡಿಕೊಂಡು ಹೋಗುವುದೆಂದು ಆ ಕಡೆ ಹೊರಟೆ. ಬಾಗಿಲು ಕಾಯಲು ನಿಂತ 'ಸ್ಕೌಟ'ನ್ನು ಅಂಗಲಾಚಿ ಕೊಂಡು ಬಹಳ ಗೋಗರೆದು ಅಂತೂ ಒಳಕ್ಕೆ ಹೋದೆ.

ಬಣ್ಣ ಬಳಿದುಕೊಳ್ಳುವ ಕೋಣೆ ಬಹಳ ಸಣ್ಣದು. ಕಾಲೇಜಿನಲ್ಲಿ ಬಿ. ಎ. ತರಗತಿಗೆ ಪಾಠಹೇಳಲು ಉಪಾಧ್ಯಾಯರು ನಿಲ್ಲಲು ಇರುವ ಜಾಗ ವೇ ರಂಗಭೂಮಿ. ಪಕ್ಕದಲ್ಲಿ ಹಿಂದಿನಿಂದ ಬಾಗಿಲು ಇರುವ ಒಂದು ಸಣ್ಣ ಕೋಣೆ. ಅಲ್ಲಿಯೇ ದೀಪದ 'ಸ್ವಿಚ್ಚು'ಗಳಿರುವುದು. ಅಲ್ಲಿಯೇ ಕುರ್ಚಿಗಳನ್ನೆಲ್ಲಾ ಅಡ್ಡ ಕಟ್ಟಿರುವುದು. ನಾಟಕವಾಗುವಾಗ ಅದೇ ಬಣ್ಣದ ಕೋಣೆ. ಅಲ್ಲಿಗೆ ನಾನು ಹೋಗುವ ವೇಳೆಗಾಗಲೇ ಏಳೆಂಟು ಜನ ನಿಂತಿ ದ್ದರು. ಆ ಕಿಷ್ಕಿಂಧೆಯಲ್ಲಿ ನಾನೂ ನೂರಕ್ಕೆ ನೂರೊಂದು ಎಂದು ನಿಂತೆ. ಅವರಿವರ ಬೆನ್ನು-ಕತ್ತುಗಳನ್ನು ಸರಿಸಿ, ಹಾಗೂ ಹೀಗೂ ನಾಟಕ ನೋಡಿ ದೆನೆಂದು ಮನಸ್ಸಿಗೆ ಸಮಾಧಾನ ಮಾಡಿಕೊಂಡೆ.

ಯಾರಾದರೂ ಹೆಸರು ಗಳಿಸಿದವರಾಗಲೀ, ಜನರ ಕಣ್ಣಿನಲ್ಲಿ ದೊಡ್ಡ ವರಾದವರಾಗಲೀ ಬಂದರೆ ಅವರ ಪರಿಚಯದವರಂತೆ ನಡೆದುಕೊಳ್ಳು ವುದು ಕೆಲವರ ಸ್ವಭಾವ. ಯಾವ ದೊಡ್ಡವರ ಹೆಸರು ಹೇಳಿದರೂ 'ಓಹೋ! ಅವರೇ?- ಅವರು ನನಗೆ ಚೆನ್ನಾಗಿ ಗೊತ್ತು. ಮೊನ್ನೆ ನಮ್ಮ ಮನೆಗೆ ಬಂದಿದ್ದರು' ಎಂದೋ 'ಅವರು ನಮ್ಮ ತಂದೆಗೆ ಚಿಕ್ಕಂದಿ

ನಿಂದಲೂ ಸ್ನೇಹಿತರು. ಒಬ್ಬರನ್ನೊಬ್ಬರು ಏಕವಚನದಲ್ಲಿಯೇ ಮಾತಾಡುತ್ತಾರೆ' ಎಂದೋ ಅವರ ವಿಷಯವಾಗಿ ಕಂತೆಕತೆ ಹೇಳುವವರು ಬಹಳ. ಕಾಲೇಜಿನಲ್ಲಂತೂ ಈ ಎರವಲು ಹಿರಿತನದ ವ್ಯಾಮೋಹ ಬಹಳ. ಅದರಿಂದಲೇ ಯಾರಾದರೂ ಭಾಷಣಕಾರರು ಬಂದರೆಂದರೆ ಅವರ ಬಾಲವಾಗಿ ಹುಡುಗರು ಓಡಾಡುವುದು. ನಾಟಕ ಮುಗಿದೊಡನೆಯೇ ನಟರ ಪರಿಚಯದವರಂತೆ ನಟಿಸುವುದು. ಬಣ್ಣದ ಕೋಣೆಗೆ ನುಗ್ಗಿ ಪಾತ್ರಧಾರಿಗಳ ಕೈ ಕುಲುಕಿ ಶುಭಾಶಯ, ವಂದನೆ, ಅಭಿನಂದನೆಗಳನ್ನು ಕೊಡುವುದು. ಹೇಗಾದರೂ ಮಾಡಿ ಅವರನ್ನು ಮಾತನಾಡಿಸಿ ಪರಿಚಯ ಮಾಡಿಕೊಳ್ಳುವುದು. ಆಮೇಲೆ ಮರುದಿನದಿಂದ ಅವರನ್ನು ಮನ ಬಂದಂತೆ ಹೊಗಳುವುದು, ಇಲ್ಲವೇ ತೆಗಳುವುದು. ಇಂತಹುದು ಸಾಮಾನ್ಯ. ಚಂದ್ರನು ಸೂರ್ಯನ ಬೆಳಕಿನ ಪ್ರತಿಬಿಂಬವಾಗಿ ಮಾತ್ರ ಬದುಕುವಂತೆ, ಈ ಸ್ವತಃ ಸತ್ವವಿಲ್ಲದವರು ಉಳಿದವರ ಹಿರಿಮೆಯ ಬಿಂಬಗಳಾಗಿ ಬದುಕುವರು. ಅಂತೂ ಆಗ ಕೂಡ ಇಪ್ಪತ್ತು ಇಪ್ಪತ್ತೈದು ಜನ ತೆರೆ ಕಳಚಿದ ಕೂಡಲೇ ಬಣ್ಣದ ಕೋಣೆಗೆ ನುಗ್ಗಿದರು. ಅವರ ನೂಕಾಟದಲ್ಲಿ ನನಗೆ ಉಸಿರು ಸಿಕ್ಕಿದಂತಾಯಿತು. ಆ ಕೋಣೆಯಿಂದ ನಾನು ಹೊರಕ್ಕೆ ಹೋಗುವುದೂ ಅಸಾಧ್ಯವಾಯಿತು. ಈ ಪಕ್ಕದಲ್ಲಿ ಸಾಮಾನು ಸರಂಜಾಮಿಟ್ಟ ಮೇಜು. ಆ ಕಡೆ ರಂಗಭೂಮಿಯಿಂದ ಒಳಕ್ಕೆ ಬರುತ್ತಿರುವವರು. ಬಾಗಿಲಕಡೆಯಿಂದ ಜನರ ಧಾಳಿ. ಈ ಬಿಕ್ಕಟ್ಟಿನಲ್ಲಿ ಸಿಕ್ಕಿಕೊಂಡ ನನಗೆ ಹೊರಗೆ ನಡೆಯಲು ದಾರಿಕೊಟ್ಟಿದ್ದರೂ ನಾನು ಹೋಗುತ್ತಿರಲಿಲ್ಲ. ಒಳಗಿದ್ದವರಾರಿಗೂ ಹೊರಕ್ಕೆ ಹೋಗಲು ಇಷ್ಟವಿರಲಿಲ್ಲವೆಂದು ತೋರುತ್ತದೆ. ಒಬ್ಬರಾದರೂ ಅಲುಗಲಿಲ್ಲ. ಇದರಿಂದ ಎಲ್ಲರಿಗೂ ಜೀವ ಮಿಸುಕಿದಂತಾಗುತ್ತಿತ್ತು. ಉಸಿರಾಡಲು ಸಾಕಷ್ಟು ಗಾಳಿ ಕೂಡ ಬರುವಂತಿರಲಿಲ್ಲ. ಆಗ ಹೇಗಾದರೂ ಸರಿ, ಇಲ್ಲಿಂದ ತಪ್ಪಿಸಿಕೊಂಡು ಹೋದರೆ ಸಾಕೆನ್ನಿಸಿ ಒದ್ದಾಡುತ್ತಿದ್ದ ನನಗೆ ನೂಕಿನಲ್ಲಿ ಮೂರ್ಛೆ ಬರುವಂತಾಯಿತು. ಕೊನೆಯಲ್ಲಿ ರಂಗಭೂಮಿಯ ಕಡೆಯಿಂದಾದರೂ ತಪ್ಪಿಸಿಕೊಳ್ಳೋಣವೆಂದು ಆ ಕಡೆ ಕಾಲಿಟ್ಟೆ. ಕಣ್ಗೆ ಕತ್ತಲು ಕವಿದಂತಾಗಿ ಏನೂ ಸರಿಯಾಗಿ ಕಾಣುತ್ತಿರಲಿಲ್ಲ. ಯಾರೋ ನನ್ನನ್ನು ಈ ಪಕ್ಕದಿಂದಲೂ ನೂಕಿದಂತಾಗಿ ಹಿಂದೆ ಸರಿದೆ.

"ಏನ್ರೀ, ಅಷ್ಟು ಗೊತ್ತಾಗುವುದಿಲ್ಲವೇ?" ಎಂದುದು ಕೇಳಿಸಿತು. ಎದುರಿಗೇ ಅವನು! ನಾಟಕದ ಹೆಣ್ಣುದನಿಯೆಲ್ಲಿ, ಈಗಿನ ಗಡಸುದನಿ ಎಲ್ಲಿ!

ಎಷ್ಟಿದ್ದರೂ ನನ್ನದೇ ತಪ್ಪು, ಏನೂ ಮಾತಾಡುವಂತಿಲ್ಲ. ಇದೂ ಅಲ್ಲದೆ ಅವನ ವಿಷಯಕ್ಕೆ ನನಗೆ ಎಲ್ಲೆಯಿಲ್ಲದ ಗೌರವ. ಅಷ್ಟು ಸುಂದರವಾಗಿ, ಸೊಗಸಾಗಿ ಮನಮೆಚ್ಚುವಂತೆ ಪಾತ್ರವಹಿಸಿದ್ದ ಅವನನ್ನು ಎದುರುಹಾಕಿ ಕೊಳ್ಳಲು ನನ್ನ ಮನಸ್ಸೊಪ್ಪಲಿಲ್ಲ. ಅವನಿಗೆ ಎದುರು ಮಾತಾಡುವು ದಿರಲಿ, ಅವನು ನನ್ನನ್ನು ಮಾತಾಡಿಸಿದನಲ್ಲ, ಅವನನ್ನು ನಾನು ಮುಟ್ಟಿದೆ ನಲ್ಲ, ಅದೇ ನನಗೊಂದು ಹೆಮ್ಮೆಯಾಯಿತು. ಅದರಿಂದಲೇ ನಾನು ಮಾತಾಡದೆ ಸುಮ್ಮನಿದ್ದೆ. ಅಷ್ಟೇ ಅಲ್ಲ. ನಮಗಿಂತ ಬಹಳ ಮೇಲು ದರ್ಜೆಯವರನ್ನು ಕಂಡರೆ ಉಪಚಾರದ ನಗೆಯ ಹಿಂದೆ ಅಸೂಯೆಯನ್ನು ಮರೆಸುವಂತೆ ನಾನೂ ನಕ್ಕೆ. ತಾಲ್ಲೂಕು ಕಚೇರಿಯ ಗುಮಾಸ್ತೆ ಡಿಸ್ಟ್ರಿಕ್ಟ್ ಕಚೇರಿಯ ಶಿರಸ್ತೇದಾರರನ್ನು ಕಂಡರೆ ಬಾಯಿ ಅಗಲಿಸುವಂತೆ ನಾನು ಹಲ್ಲು ಕಿರಿದಿರಬಹುದು. ನನಗೆ ಸರಿಯಾಗಿ ತಿಳಿಯದು.

ನಾನು ಮಾತನಾಡದೆ ಸುಮ್ಮನಿದ್ದರೂ ಅದು ಅಷ್ಟಕ್ಕೇ ಮುಗಿಯ ಲಿಲ್ಲ. ಆ ನೂಕು ನುಗ್ಗಲಲ್ಲಿ ನಾನು ಅವನಿಂದ ಎಷ್ಟೇ ಹಿಂದೆ ಸರಿದರೂ ಮತ್ತೆ ಮತ್ತೆ ಮುಂದೆ ನೂಕಲ್ಪಡುತ್ತಿದ್ದೆ. ನೂಕುನುಗ್ಗಲು ಹಿಂದಿನಿಂದ ಒಂದೇ ಸಮನಾಗಿ ಏರಿಬರುತ್ತಿತ್ತು. ನಾನು ಆ ಅಲೆಗಳಲ್ಲಿ ಸಿಕ್ಕ ಒಂದು ಬೆಂಡಿನ ಚೂರಾಗಿದ್ದೆ. ಹಿಂದಿನಿಂದ ಜನರ ಒತ್ತಡದಿಂದ ಮತ್ತೆ ನಾನು ಮುಂದಕ್ಕೆ 'ಹೆಜ್ಜೆಯಿಡಲೇ ಬೇಕಾಯಿತು. ತಡೆಯಲು ಯತ್ನಿಸಿದ್ದರಿಂದ ಇನ್ನೂ ಕೇಡಾಯಿತು. ನಿಂತಿದ್ದ ಆಯ ತಪ್ಪಿ ಮುಂದೆ ಕೊಂಚ ಮುಗ್ಗ ರಿಸಿದೆ. ಆಸರೆಗಾಗಿ ಕಣ್ಕತ್ತಲೆಯಲ್ಲಿ, ಕೈನೀಡಿದವನಿಗೆ ಯಾವುದೋ ಭುಜ ಸಿಕ್ಕಿತು. ಅದಕ್ಕೊರಗಿಕೊಂಡೆ. ಕೈಗೆ ಕೊಂಚ ಬಣ್ಣ ಅಂಟಿದಂ ತಾಯಿತು. ಮತ್ತೆ ಮಾತು- ಅವನಿಂದಲೇ ಇನ್ನೂ ಗಡಸಾಗಿ.

"ಏನ್ರೀ, ನಿಮಗೆ ಎಷ್ಟು ಸಾರಿ ಹೇಳಬೇಕ್ರೀ, ನಾಟಕ ಮುಗಿ ಯಿತು ಕಣ್ರೀ, ಹೋಗ್ರೀ ಇನ್ನು" ಎಂದ.

ನನಗೇನೋ ಆ ಮಾತಿನಿಂದ ಕೊಂಚ ಬೇಸರವಾಯಿತು. ನಾಟಕ ಮುಗಿಯಿತು ಎಂದು ನನಗೆ ತಿಳಿಯದೇನು? ಅದನ್ನಿವನು ಆ ತಾತ್ಸಾರದ ದನಿಯಲ್ಲಿ ಹೇಳಬೇಕೆ? ನಾವು ನಿಂತರೆಷ್ಟು ಬಿಟ್ಟರೆಷ್ಟು, ಇವನಿಗೇನು ಎಂದುಕೊಂಡೆ ಮನಸ್ಸಿನಲ್ಲೇ. ಬಾಯಲ್ಲಿ ಮಾತ್ರ ಮಾತೊಂದೂ ಹೊರ ಡಲಿಲ್ಲ. ಅವನೊಬ್ಬ ದೊಡ್ಡನಟನೆನ್ನುವ ಗೌರವ, ನನ್ನ ಕಿರಿತನದ ಕಲ್ಪನೆ, ಅವನೆಲ್ಲಿ ತಿರುಗಿಬೀಳುವನೋ ಎನ್ನುವ ಹೆದರಿಕೆ. ಇವೆಲ್ಲಸೇರಿ ನನ್ನ ಮಾತನ್ನು ತಡೆದುವು.

"ಹೋಗ್ರೀ, ಹೊರಗಡೆ ಹೋಗ್ರೀ, ಯಾಕೆ ನನ್ನ ಪ್ರಾಣ ಹಿಂಡ್ತೀರಿ-ಥುತ್-ಎಂಥಾ ಹುಡುಗರಪ್ಪ!" ಎಂದ ಅವನು ಮತ್ತೊಮ್ಮೆ.

ಆ ಧ್ವನಿಯಲ್ಲಿ ಜಂಭವಿತ್ತು, ತಾತ್ಸಾರವಿತ್ತು, ಬೇಸರವಿತ್ತು. ತಾನು ದೊಡ್ಡನಟ. ತನ್ನ ಸಮಾನವಿಲ್ಲ. ತಾನು ಎಲ್ಲರ ಮೆಚ್ಚುಗೆಯನ್ನು ಪಡೆವವನು ಎಂಬುದು ತಿಳಿದವನ ಗರ್ವದ ಧ್ವನಿ ಅದು. ತನಗಿಂತ ಉಳಿದವರೆಲ್ಲರೂ ಕೀಳೆಂಬ ಹಿರಿತನದ ತಾತ್ಸಾರ ಇತ್ತು. ಯಾರಿಗೂ ಹೇಗೆ ನಡೆದುಕೊಳ್ಳಬೇಕೆಂಬುದೇ ತಿಳಿಯದು ಎನ್ನುವ ಬೇಸರವೂ ಇತ್ತು. ಅವನು ಒಳ್ಳೆಯ ನಟನೇ ಆದರೂ ಹಾಗೆ ಗರ್ವವನ್ನು ತೋರಿಸುವುದು ಸರಿಯಲ್ಲವೆಂದು ನನಗೆ ತೋಚಿತು. ನನಗಂತೂ ಅವನ ಆ ಮಾತು ಒಪ್ಪಲಿಲ್ಲ. ಆದರೂ ನಾನು ಮಾತಿಲ್ಲದೆ ಹೊರಡಲು ಒಂದು ಹೆಜ್ಜೆಯಿಟ್ಟೆ. ಆದರೆ ಉಳಿದವರೆಲ್ಲಾ ಬೈಸಿಕೊಂಡರೂ ಸಂತೋಷದಿಂದ ನಗುತ್ತಾ ಹಲ್ಲು ಕಿರಿಯುತ್ತಿದ್ದರೇ ಹೊರತು ಕೊಂಚವಾದರೂ ಅಲುಗಾಡಲೂ ಇಲ್ಲ. ನನ್ನಂತೆ ಅವರು ಅವನ ಮಾತಿನಿಂದ ನೊಂದುಕೊಂಡರೋ ಇಲ್ಲವೋ-ಆ ಬಗೆಯ ಮಾತು ಅವರಿಗೆ ಸಾಮಾನ್ಯವಾಗಿಹೋಗಿತ್ತೋ ಏನೋ-ಅಂತೂ ಯಾರೂ ಹೊರಡುವ ಯೋಚನೆ ಮಾಡಿದಂತೆ ಕಾಣಲಿಲ್ಲ.

ನಾನು ಎಷ್ಟೇ ಪ್ರಯತ್ನಿಸಿದರೂ ಅಲ್ಲಿಂದ ಹೊರಡುವುದು ಅಸಾಧ್ಯವಾಯಿತು. ಕೊನೆಗೆ ನನ್ನೆದುರಿಗೇ ಅಡ್ಡವಾಗಿ ನಿಂತು ತನ್ನ ಪಾತ್ರದ ರವಿಕೆಯನ್ನು ಕಳಚುತ್ತಿದ್ದ ಅವನನ್ನೇ ಕೇಳಿದೆ.

"ನೀವು ಕೊಂಚ ಪಕ್ಕಕ್ಕೆ ಸರಿದರೆ ನಾನು ಹೋಗುತ್ತೇನೆ." ಎಂದು

ಬಹಳ ನಮ್ರತೆಯಿಂದ ಕೇಳಿದೆ. ನಮ್ರತೆಯೇ ಇರಬೇಕು. ಆ ಸಮಯ ದಲ್ಲಿ ಅವನ ವಿಷಯವಾಗಿ ನನಗೆ ಬೇರೆ ಯಾವ ಭಾವನೆಯಿರಲೂ ಸಾಧ್ಯ ವಿರಲಿಲ್ಲ.

ನನ್ನ ಮಾತಿಗೆ ಪ್ರತಿಯಾಗಿ ಅವನು ಸುಮ್ಮನೆ ಒಂದು ಬಾರಿ ಕತು ಕೊಂಕಿಸಿದ. ಅದುಕೂಡ ಹೆಂಗಸಿನಂತೆಯೇ. ಯಾರಾದರೂ ಹೆಂಗಸರು ಆರತಿಗೋ ಮುತ್ತೈದುವಕ್ಕೋ ಬಂದಿರುವಾಗ ಒಬ್ಬಳು ಕತ್ತಿನಲ್ಲಿರುವ ಅವ ಲಕ್ಕಿ ಕಾಳಿನ ಚಿನ್ನದ ಸರವನ್ನು ಅವಳ ಓರಗೆಯವಳು ಹೊಗಳುತ್ತಾಳೆ. ಹೊಗಳಿಸಿಕೊಂಡವಳು ಹಿಗ್ಗುತ್ತಿರುವಾಗ ಅಂತಹುದೇ ಸರ ತನ್ನ ಗೆಳ ತಿಯ ಬಳಿಯಿದೆಯೆಂದು ಇನ್ನಾರಾದರೂ ಹೇಳಿದರೆ ಸಾಕು. ಆಗ ಸರದ ಹೆಂಗಸು ಆವಳನ್ನು ತಿಂದುಹಾಕಿಬಿಡುವಂತೆ ನೋಡುತ್ತಾಳೆ. ಜತೆಗೆ 'ಅವಳಿಗೆಲ್ಲಿ ಇಂತಹ ಹಾರ. ಅದು ಕೃತಕ ಹಾರವಿರಬೇಕು' ಎನ್ನುವ ತಾತ್ಸಾರದಿಂದ ತನ್ನ ಹೆಚ್ಚುಗಾರಿಕೆಯನ್ನು ಒಂದು ಕುಹಕ ನೋಟದಲ್ಲಿ ಕೊಂಕು ನಡೆಯಲ್ಲಿ ತೋರಿಸಿಬಿಡುತ್ತಾಳೆ. ಅಂತಹುದೇ ನೋಟ ನನಗೆ ಅವನಿಂದ ದೊರೆತದು. ಆ ನೋಟವನ್ನು ನಾನು ಎಂದಿಗೂ ಮರೆಯು ವುದಿಲ್ಲ. ಆ ನೋಟದಿಂದ ನನ್ನ ಹೃದಯದಲ್ಲಿ ಬೆಂಕಿಯಿಟ್ಟಂತಾಯಿತು. ಅಷ್ಟೊಂದು ಹೀನವಾಗಿ ನನ್ನನ್ನು ಇದುವರೆಗೆ ಯಾರೂ ಕಂಡಿರಲಿಲ್ಲ. ಮಹಾ! ಏನೋ ಚೆನ್ನಾಗಿ ಪಾತ್ರವಹಿಸಿಬಿಟ್ಟರೆ ಉಳಿದವರಿಗಿಂತ ತಾನೇನೋ ಬಹಳ ಹೆಚ್ಚು, ತನಗೇನೋ ಕಿರೀಟ ಕೆತ್ತಿದೆಯೆಂದುಕೊಂಡು ಬಿಟ್ಟಂತಿದೆ. ಪಕ್ಕಕ್ಕೆ ನೂಕಿಬಿಟ್ಟು ಹೋಗಿಬಿಡಲೇ ಎಂದುಕೊಂಡೆ. ಆದರೆ ಹುಚ್ಚುಕೋಪ ಒಡನೆಯೇ ತಣ್ಣಗಾಯಿತು. ಅವನ ಸುಂದರ ವಾದ ಮುಖವಿರಬಹುದು. ಯಾವುದೋ ನನ್ನನ್ನು ತಡೆಯಿತು. ಮನಸ್ಸಿನ ಕೋಪ ಮೆಲ್ಲನೆ ನೋವಾಗಿ ಮಾರ್ಪಟ್ಟಿತು. ಕೊಂಚ ಈರ್ಷ್ಯೆ ಕೂಡ ಅದರಲ್ಲಿ ಪಾಲುಗೊಂಡಿತ್ತು. ಆದರೆ ಅವನಿನ್ನೂ ಸೀರೆಯನ್ನು ತೆಗೆದು ಮಡಿಸಿಡುವವರೆಗೂ ನನಗೆ ಅಲ್ಲಿರುವುದು ಕಷ್ಟವಾಗಿತ್ತು ಆ ಬಿಸಿ ಸೆಕೆ ತಡೆಯಲಸಾಧ್ಯವಾಗಿತ್ತು. ಇನ್ನು ಹತ್ತು ನಿಮಿಷ ಅಲ್ಲಿದ್ದರೆ ಖಂಡಿತ ಜ್ಞಾನ ತಪ್ಪಿಹೋಗುವುದೆಂದು ಅನಿಸಿತು. ಎಲ್ಲರೂ ಒಂದೇ ಸಮನಾಗಿ ಅದು ಹಾಗಾಯಿತು, ಈ ಪಾತ್ರ ಹೀಗಾಯಿತು ಎಂದು ವಟಗುಟ್ಟುತ್ತಿ

ದ್ದರು. ಆ ಕೋಲಾಹಲದಿಂದ ತಲೆ ಬೇರೆ ಚಿಟ್ಟುಹಿಡಿದಂತಾಯಿತು.

"ಕೊಂಚ ಪಕ್ಕಕ್ಕೆ ಸರಿದರೆ, ಹೊರಕ್ಕೆ ಹೊರಟು ಹೋಗುತ್ತೇನೆ." ಎಂದೆ ಕೊಂಚ ನೊಂದ ದನಿಯಲ್ಲೇ!

"ಎಲ್ಲಿಗೆ ಸರಿಯುವುದು? ಎಲ್ಲಿದೆ ಜಾಗ?" ಎಂದು ಅವನು ನನ್ನ ಕಡೆಗೆ ದುರುಗುಟ್ಟಿಕೊಂಡು ನೋಡಿದ. ಅದು ನಾಟಕದ ಒಂದು ನಿಲುವು ಎಂದು ನನಗೆ ಗೊತ್ತು. ಗಂಡ ಹಣ ಕೇಳಿದಾಗ ಹೆಂಡತಿ ಹಾಗೆಯೇ ನಿಂತಿದ್ದುದು ನನಗೆ ನೆನಪಾಯಿತು. ಅವನಿಗೆ ಸಾಮಾನ್ಯ ನಡವಳಿಕೆಯಲ್ಲೂ ನಾಟಕದ ಚಹರೆ ರೀತಿ ಬಂದುಬಿಟ್ಟಿತ್ತು. ಆಗ ನನಗೆ ಹಾಗೆಂದು ತಿಳಿಯದಿದ್ದರೂ ಅನಂತರ ಗೊತ್ತಾಯಿತು. ಆ ಬಿರುನೋಟಕ್ಕೆ ನಾನು ನಿಜವಾಗಿಯೂ ಬೆದರಿದೆ. ಆದರೆ ಹಿಂದೆಯೂ ಹೋಗುವಂತಿಲ್ಲ. ಅಂತೂ ಅವನು ತನ್ನ ಪಾತ್ರದ ಬಟ್ಟೆಬರೆಯನ್ನೆಲ್ಲಾ ಕಳಚಿ, ಬಣ್ಣ ತೆಗೆಯಲು ಮುಖಕ್ಕೆ ಕೊಬ್ಬರಿಯೆಣ್ಣೆ ಹಚ್ಚಿಕೊಳ್ಳುವವರೆಗೂ ನಾನೂ ಅಲ್ಲಿಯೇ ಅವನೆದುರಿಗೇ ನಿಲ್ಲಬೇಕಾಯಿತು. ಅವನ ಗೊಣಗಾಟ ಕೇಳಬೇಕಾಯಿತು. ಅವನ ವಿಚಾರವಾಗಿ ಮನಸ್ಸು ಕೊಂಚ ಅಸಮಾಧಾನಗೊಳ್ಳಲು ಕಾರಣವಾಯಿತು.

ಆದರೆ ಈ ಅಸಮಾಧಾನ ಬಹಳ ಹೊತ್ತು ಉಳಿಯಲಿಲ್ಲ. ಹೊರಗೆ ಬಂದು ಹೊಸ ಗಾಳಿಯನ್ನು ಉಸಿರಾಡಿದ ಕೊಂಚ ಹೊತ್ತಿಗೇ ಈ ಅಸಮಾಧಾನ ಮಾಯವಾಯಿತು. ಆ ಅಸಮಾಧಾನಕ್ಕೆ ಬದಲು ಇನ್ನೊಂದು ಅಸಮಾಧಾನ ತಲೆಹಾಕಿತು. ನಾನು ಬರುವ ವೇಳೆಗೆ ಹುಡುಗಿಯರೆಲ್ಲಾ ಹೊರಟು ಹೋಗಿದ್ದರು. ಅದಕ್ಕೆ, ನನಗೆ ಅವರನ್ನು ನೋಡಲು ಅನುವಾಗದಿರಲು ಅವನೇ ಕಾರಣವೆನಿಸಿತು. ಆದರೆ ಈ ಅಸಮಾಧಾನ ಕೂಡ ಒಂದು ಕ್ಷಣ ಮಾತ್ರ. ಈ ಅಸಮಾಧಾನ ನನ್ನಿಂದ ಸಂಪೂರ್ಣವಾಗಿ ಮಾಯವಾಯಿತು ಎಂದಿದ್ದೆ. ಎಲ್ಲೋ ಮನಸ್ಸಿನೊಳಗೆ ಅದು ಅಡಗಿಕೊಂಡಿರಬೇಕು. ಇಲ್ಲದಿದ್ದರೆ ಇಷ್ಟು ದಿನಗಳನಂತರ, ಈಗ, ಈ ಕತೆ ಹೇಳುವಾಗ ನನ್ನ ಮನಸ್ಸಿಗೆ ಅದು ಅಷ್ಟು ಹಸುರಾಗಿ ನೆನಪಾಗಲು ಕಾರಣವೇ ಇಲ್ಲ. ಅಂದಿನ ದೃಶ್ಯದ ಜತೆಗೇ ಅಂದಿನ ಎಲ್ಲ ಭಾವನೆಗಳೂ ಅಚ್ಚಳಿಯದೆ ನೆನಪಿನಲ್ಲಿದೆ.

ಮನೆಗೆ ಬರುತ್ತಾ ದಾರಿಯಲ್ಲೆಲ್ಲಾ ಅವನ ಯೋಚನೆಯೇ. ಅವನಿಗೆ ಹೆಂಗಸಿನ ಪಾತ್ರ ಬಹಳ ಸಹಜವಾಗಿ ಕಾಣುತ್ತಿತ್ತು. ಆಕೃತಿ ಯಷ್ಟೇ ಅಲ್ಲ. ಅವನ ದನಿ ಕೂಡ ಹೆಣ್ಣು ದನಿಯೇ. ಅವನ ಒಂದೊಂದು ಮಾತು ಕೂಡ ಹೆಂಗಸಿನ ಮಾತಿನಂತೆಯೇ. ಗಂಡಸಿನ ದನಿ ಎಷ್ಟೇ ಮೃದುವಾಗಿದ್ದರೂ ಹೆಣ್ಣಿನ ದನಿಯ ಸುಸ್ವನ ಅದಕ್ಕೆ ಬರುವುದಿಲ್ಲ. ಹೆಣ್ಣಿನ ಹೃದಯದಲ್ಲಿ, ನಗೆಯಲ್ಲಿ, ನೋಟದಲ್ಲಿ ಹೇಗೋ ಹಾಗೆಯೇ ಮಾತಿನಲ್ಲಿ, ದನಿಯಲ್ಲಿ ಒಂದು ವಿಶಿಷ್ಟ ಮಾಧುರ್ಯವಿದೆ. ಆ ಮಾಧುರ್ಯ ಹೀಗೆಯೇ ಎಂದು ಹೇಳುವುದು ಅಸಾಧ್ಯ. ಬಿಸಿಲುಗೋಲಿನ ಹಾಗೆ ಚಕ ಮಕಿಸುತ್ತದೆ. ಅಲ್ಲಿರುತ್ತದೆ. ಕೈಗೆ ಮಾತ್ರ ಸಿಗುವುದಿಲ್ಲ. ಈ ಹೆಣ್ತನದ ಮಾಧುರ್ಯವೇ ಕವಿಗಳಿಗೆ, ಪ್ರೇಮಿಗಳಿಗೆ ಹುಚ್ಚುಹಿಡಿಸುವುದು. ಈ ಮಾಧುರ್ಯ ಅವನ ಕಂಠದಲ್ಲಿತ್ತು. ಹೆಣ್ಣಿನಲ್ಲಿ ಸಹಜವಾದ ಗುಣಗಳು— ಮಾತಿನಲ್ಲಿ ಪಲುಕು, ನಡಿಗೆಯಲ್ಲಿ ಕಂಡೂ ಕಾಣದಂತಹ ನಸುಬೆಡಗು, ನೋಟದಲ್ಲಿ ಒಂದು ನಮೂನೆಯ ಬಿಂಕ, ನಿಲುವಿನಲ್ಲಿ ಕೊಂಚ ವೈಯಾರ, ಕಣ್ಣಿನಲ್ಲಿ ನಗು ಅಳುಗಳ ಕೂಡಿಕೆ, ಮುಖದ ಮೇಲೆ ಸದಾ ಸಿದ್ಧವಾಗಿರುವ ಮುನಿಸಿನ ನಾಚಿಕೆಯ ನಸುನಗು— ಇವುಗಳೆಲ್ಲ ಅವನಿಗೆ ಸಹಜವಾಗಿಯೇ ಬಂದಂತಿತ್ತು. ಆದರಿಂದಲೇ ಅವನ ಪಾತ್ರದ ನಿರ್ವಹಣೆಯಲ್ಲಿ ಒಂದು ಸಾರಿಯಾಗಲಿ ಅಸಹಜತೆಯಾಗಲಿ ಅತಿಯಾಗಲಿ ಕಾಣಲಿಲ್ಲ. ಎಷ್ಟು ಬೇಕೋ ಅಷ್ಟರ ಹದವಿತ್ತು. ಹೆಚ್ಚೂ ಇಲ್ಲದ ಕಡಿಮೆಯೂ ಅಲ್ಲದ ಮಿತಿಯಿತ್ತು. ಇನ್ನು ಯಾರಾದರೂ ಆಗಿದ್ದರೆ ಖಂಡಿತವಾಗಿಯೂ ಆ ಪಾತ್ರ ಕೆಡಿಸಿಬಿಡುತ್ತಿದ್ದರು. ಆದರಲ್ಲಿಯೂ ಅದೊಂದು ದೃಶ್ಯ. ಆ ದೃಶ್ಯ ದಲ್ಲಿ ಅವನ ನಟನೆಯ ಚಾತುರ್ಯ, ಪಾತ್ರವನ್ನು ಅವನು ಅರ್ಥಮಾಡಿ ಕೊಂಡು ಅಭಿನಯಿಸಿದ ರೀತಿ ಎಲ್ಲರಿಗೂ ಮೆಚ್ಚುಗೆಯಾಗಿತ್ತು. ಗಂಡ ಮನೆಗೆ ಬಂದಿದಾನೆ. ಹೆಂಡತಿಗೆ ಗೊತ್ತು ಗಂಡನ ಸ್ಥಿತಿ, ಮನೆಯ ಗತಿ. ಮನೆ-ಹೆಸರಿಗೆ ಮನೆ. ಮೇಲೆ ಆಕಾಶವೇ ಛಾವಣಿ. ಮಳೆ ಏನಾದರೂ ಬಂದರೆ ಮನೆಯೊಳಗೆ ನೀರು ನಿಂತು ಮನೆ ನೀರಿನಲ್ಲಿ ತೇಲುವಂತಿರುತ್ತಿತ್ತು. ಬೆಳಗ್ಗೆಯ ಗಂಜಿಗಾದರೆ ರಾತ್ರಿ ಗಂಜಿಗೆ ಚಿಂತೆ. ಬೆಳಗ್ಗೆ ಊಟವಿಲ್ಲದೆ ಬರಿಯ ಹುಣಿಸೆಹಣ್ಣನ್ನು ಕಿವುಚಿ ಬೆಲ್ಲದಲ್ಲಿ "ಪಾನಕ" ಕುಡಿದಿದ್ದರು.

ಅಂತಹುವರಲ್ಲಿ ಗಂಡ ಬಹಳ ಜೋರಿನಿಂದ ತನಗೆ ಹತ್ತು ಲಕ್ಷ ರೂಪಾಯಿ ಆಸ್ತಿ ಬಂತೆಂದು ಕುಣಿಯುತ್ತಾ ಬಂದರೆ ಹೆಂಡತಿಗೆ ಏನನ್ನಿಸಬೇಕು! ಗಂಡನಿಗೆ ಹುಚ್ಚು ಹಿಡಿದುಬಿಟ್ಟಿದೆ. ಬಡತನದ ಅತಿ ಸಂಕಟದಿಂದ ಬುದ್ಧಿ ಭ್ರಮಣೆಯಾಗಿ ಲಕ್ಷಾಧಿಪತಿಯಾದ ಕನಸು ಹಿಡಿದಿದೆಯೆಂದೆನಿಸಿ ಹೆಂಡತಿಗೆ ಗಾಬರಿ, ದುಃಖ. ಈ ನೋವಿನ ಜತೆಗೇ ಗಂಡನ ಈ ಕನಸು ನಿಜವಾಗಿದ್ದರೆ ಎಷ್ಟು ಚೆನ್ನ ಎನ್ನುವ ಒಳಆಸೆ. ಅದು ತನ್ನ ಕನಸು ಕೂಡ. ಮರುನಿಮಿಷವೇ ಇದೇ ನಮ್ಮ ಹಣೆಯು ಬರಹವೆನ್ನುವ ನಿರಾಸೆ, ಉದಾಸ. ಜತೆಗೆ ನಿಜವಿದ್ದರೂ ಇರಬಹುದೆನ್ನುವ ಅರೆ ನಂಬಿಕೆ, ಅರೆ ಸಂದೇಹ. ಈ ಮಿಶ್ರಭಾವವನ್ನು ಒಂದಾದಮೇಲೊಂದರಂತೆ ಅವನು ಮುಖದಲ್ಲಿ ತೋರಿದುದು ಅವನ ಅಭಿನಯಕಲೆಯ ಹೆಚ್ಚಳ! ಎಷ್ಟರಮಟ್ಟಿಗೆ ಅವನಿಗೆ ಅದು ಸಾಧಿಸಿದೆ ಎನುವುದರ ಗುರುತು. ಅವನನ್ನು ಬಿಟ್ಟರೆ ಅಭಿನಯದಲ್ಲಿ ಮತ್ತಾರೂ ಇಲ್ಲ. ಕಾಲೇಜಿನಲ್ಲಿ ಅವನಿಗೆ ಸರಿಗಟ್ಟುವವರಾರೂ ಇಲ್ಲ. ಹೆಂಗಸರೂ ಕೂಡ ಅಷ್ಟೊಂದು ಸಹಜವಾಗಿ ನಿರ್ವಹಿಸಲಾರರು-ಎಂದು ನನ್ನ ಮನಸ್ಸಿಗೆ ನಿಶ್ಚಯವಾಗಿ ಹೋಗಿತ್ತು. ಇಷ್ಟಾದರೂ ಮನಸ್ಸಿನ ಹಿನ್ನೆಲೆಯಲ್ಲಿ ಅವನ ವಿಚಾರವಾಗಿ ಕೊಂಚ ಅಸಮಾಧಾನ. ಅಷ್ಟೊಂದು ಹೆಡಸು ಅವನಿಗೆ ಇರಬಾರದಾಗಿತ್ತು. ಅದಿಲ್ಲದಿದ್ದರೆ ಚೆನ್ನಾಗಿತ್ತು. ಅತಿ ಜಂಬದಿಂದ ಅವನ ಕಲೆ ಕೆಳಗಿಳಿಯುಬಹುದೆನ್ನುವ ಸಂದೇಹವೂ ನನಗೆ ತೋರಿತು. ನನ್ನನ್ನು ಅವನು ಮಾತನಾಡಿಸಿದನಲ್ಲ ಎನುವ ಸಂತೋಷ. ಆದರೆ ಆ ಮಾತಿನಲ್ಲಿ ನನ್ನನ್ನು ಬೈದನಲ್ಲಾ ಎನುವ ಕೋಪ, ಅಸಮಾಧಾನ.

ಆ ರಾತ್ರಿಯೆಲ್ಲಾ ನನಗೆ ಅವನ ಆ ಹೆಣ್ಣಿನ ಪಾತ್ರ ಮರೆಯಲಾಗಲೇ ಇಲ್ಲ. ಪುಸ್ತಕ ಓದಲು ತೆರೆದರೆ ಅಲ್ಲಿ ಅವನ ಹೆಣ್ಣುವೇಷ. ಕೊನೆಗೆ ಕಣ್ಣುಮುಚ್ಚಿದಾಗ ಕೂಡ ಅದೇ ಆಕೃತಿ. ಆ ರಾತ್ರಿ ಎಷ್ಟು ಜನರ ಕನಸಿನಲ್ಲಿ ಅವನ ಹೆಣ್ಣಿನ ರೂಪ ಬಂದಿತ್ತೋ ಏನೋ! ನನ್ನ ನಿದ್ರೆಯಲ್ಲೇನೋ ಬರಿಯ ಅವನ ಕನಸುಗಳೇ. ಅಂದು ರಾತ್ರಿ ಅವನನ್ನು ರಂಗಭೂಮಿಯ ಮೇಲೆ ಕಂಡ ಹೆಂಗಸರ, ಗಂಡಸರ ಕನಸಿನಲ್ಲಿ ಯಾವುದಾದರೂ ಒಂದು ರೂಪದಲ್ಲಿ ಕಾಣಿಸಿಕೊಂಡಿದ್ದನೆಂದು ನಾನು ಖಂಡಿತವಾಗಿ ಹೇಳಬಲ್ಲೆ!

೨

ಮರುದಿನ ಎಂದಿನಂತೆಯೇ ಕಾಲೇಜಿಗೆ ಹೋದೆ.

ಸಾಮಾನ್ಯವಾಗಿ ಮೊದಲನೆಯ ಪಾಠಕ್ಕೆ ನಾನೆಂದೂ ವೇಳೆಗೆ ಸರಿಯಾಗಿ ಹೋದುದೇ ಇಲ್ಲ. ಇದರಿಂದ ಎಲ್ಲಾ ಅಧ್ಯಾಪಕರೂ ನನ್ನ ಮೇಲೆ ಸ್ವಲ್ಪ ಬಿಸಿಯಾಗಿಯೇ ಇದ್ದರು. ಆದರೆ ನಾನು ಒಳ್ಳೆಯ ಆಟಗಾರ, ಒಳ್ಳೆಯ ವಿದ್ಯಾರ್ಥಿಯೂ ಹೌದೆಂದು ತಿಳಿದ ಮೇಲೆ ತೆಪ್ಪಗಾದರು. ಇದರಿಂದ ವೇಳೆಗೆ ಮೀರಿಹೋಗುವುದು ನನಗೆ ಅಭ್ಯಾಸವಾಗಿಹೋಗಿತ್ತು. ಇದೂ ಅಲ್ಲದೆ ನಮ್ಮ ಮನೆಯಲ್ಲಿ ಊಟ ಮುಗಿಸಿದೊಡನೆಯೇ ನಮ್ಮ ಅಜ್ಜನ ಹಳೆಯ ಸೈಕಲ್ಲನ್ನು ಹತ್ತಿ ಬರುವುದೆಂದರೆ ಎಲ್ಲೂ ಇಲ್ಲದ ಪ್ರಯಾಸ.

ಕಾಲೇಜು ಬಳಿ ಬಂದು ಮಹಾರಾಜಾಕಾಲೇಜಿನ ಅಂಗಳದೊಳಗಿನ ಹಾದಿಯಲ್ಲಿ ಹೋಗುತ್ತಿರುವಾಗ ಅಲ್ಲಿಯೇ ನನ್ನ ಸಹಪಾಠಿಗಳು ನಿಂತಿದ್ದುದು ಕಾಣಿಸಿತು. ಆಗ ನನಗೆ ನೆನಪಾಯಿತು. ಆ ದಿನ ಅಧ್ಯಾಪಕರು ಬಂದಿರಲಿಲ್ಲ, ಮೊದಲ ಗಂಟೆ ರಜಾ ಎಂಬುದು. ಸರಿ, ಎಲ್ಲರೂ ಹರಟೆ ಕೊಚ್ಚಲಾರಂಭ. ಆ ಮಾತು, ಈ ಮಾತು ಎಲ್ಲಾ ಬಂತು. ನಾವು ಇಂಟರ್‌ಮೀಡಿಯೆಟ್ ಕಾಲೇಜಿನ ಹುಡುಗರು. ಬರುವ ವರ್ಷ ಮಹಾರಾಜ ಕಾಲೇಜಿಗೆ ಬಂದರೂ ಈಗಿನಿಂದಲೂ ಅದರ ಬಗ್ಗೆ ವ್ಯಾಮೋಹ. ಅಂದಮೇಲೆ ಸಹಜವಾಗಿಯೇ ಕಾಲೇಜು ಹುಡುಗಿಯರ ಮಾತು ಬಂತು. ಅದು ಕಾಲೇಜು ಹುಡುಗರಿಗೆ ಮಾತನಾಡಲು ಜನ್ಮ ಸಿದ್ಧ ಹಕ್ಕು. ಯಾವ ವಿಷಯ ಮಾತನಾಡಲಾರಂಭಿಸಿದರೂ ಕೊನೆಗೆ ಅವರ ವಿಷಯಕ್ಕೆ ಮಾತು ತಿರುಗುವುದು. ಹಾಗೆಯೇ ಹೆಂಗಸರಲ್ಲಿ ಕೂಡ. ನಾನು ಹೀಗೆ ಹೇಳಿದೆನೆಂದು ಯಾರೂ ಕೋಪಿಸಿಕೊಳ್ಳುವ ಕಾರಣವಿಲ್ಲ. ಎಲ್ಲ ವಿಷಯವನ್ನೂ ಮುಚ್ಚುಮರೆಯಿಲ್ಲದೆ ಇದ್ದುದನ್ನು ಇದ್ದಂತೆ ಬಿಚ್ಚಿ ಹೇಳುವುದೇ ನನ್ನ ರೀತಿ. ಇದೂ ಅಲ್ಲದೆ ಈ ವಿಷಯ ಎಲ್ಲರಿಗೂ ಗೊತ್ತಿರುವುದೇ. ಈ ಸಹಜವಾದ ಮಾತನ್ನು ಮುಚ್ಚಿಡುವ ಅವಶ್ಯಕತೆಯಾದರೂ ನನಗೆ ತೋರುವುದಿಲ್ಲ. ಸರಿ, ಆ ಹುಡುಗಿಯ ಅಲಂಕಾರ, ಇನ್ನೊಂವರ "ರೋಫು"

ಬೆಡಗು ಇವುಗಳ ಚರ್ಚೆಯೂ ಆಯಿತು. ಹಲವಾರು ಹುಡುಗಿಯರ ಒಳ್ಳೆಯತನಕ್ಕೆ ಮಸಿ ಬಳಿದುದೂ ಆಯಿತು. ಅದರಲ್ಲಿಯೇ ನಮಗೊಂದು ಹಿಗ್ಗು! ಏನೋ ದಿಗ್ವಿಜಯ ಮಾಡಿದಂತೆ ಆನಂದ!.

"ಏನಪ್ಪ ಹೆಣ್ಣುಗಳೋ ಇವು! ಎಲ್ಲಾ ಜುಜುಬಿ ಮಾಲು. ನಿನ್ನೆ ಆ ಹೆಣ್ಣು ಪಾರ್ಟು ಹಾಕಿದ್ದನಲ್ಲ ಅವನು ನಿಜವಾಗಿಯೂ ಹೆಣ್ಣಾಗಿದ್ದರೆ-" ಎಂದ ಒಬ್ಬ.

"ಥೇಟ್ ಹುಡುಗಿಯ ಹಾಗೇ ಇದ್ದಾನಲ್ಲೋ. ಅವನಿಗೆ ಮೀಸೆ ಕೂಡ ಮೊಳತಿಲ್ಲ"

"ದೂರದಿಂದ ನೋಡಿದರೆ ಹುಡುಗಿಯೇ ಅಂತ ಅನಿಸುತ್ತೆ ಕಣೋ. ನಿನ್ನೆಯಂತೂ ನಾಟಕದಲ್ಲಿ ಬಲೆ ಜೋರಾಗಿತ್ತೂ!"

ನಾನು ಆ ಮಾತುಗಳನ್ನೆಲ್ಲ ಕೇಳುತ್ತ ಮಾತಿಲ್ಲದೆ ನಿಂತಿದ್ದೆ. ಅವನಿಗೆ ಇವರೆಲ್ಲ ಸಲ್ಲಿಸುವ ಗೌರವ ನನಗೇ ಸಲ್ಲುತ್ತಿದೆಯೋ ಎನ್ನುವಂತಹ ಹಿಗ್ಗು. ಹಿಂದಿನ ರಾತ್ರಿ ಅವನು ನನ್ನನ್ನು ಗದರಿಕೊಂಡುದು ನನಗೆ ಪೂರ್ತಿ ಮರೆತೇ ಹೋಯಿತು. ಅವನ ಪಾತ್ರದ ವೈಖರಿ ನನ್ನ ಮುಂದೆ ಇನ್ನು ಕಣ್ಣಿಗೆ ಕಟ್ಟಿದಂತಿತ್ತು. ನನ್ನ ಮನಸ್ಸು ಹೇಗೋ ಅವನಿಗೆ ಮಾರುಹೋಗಿತ್ತು. ಅದರಿಂದಲೇ ನಾನು ಅವನ ಬಗ್ಗೆ ಉಳಿದವರ ಮಾತನ್ನು ಕೇಳುತ್ತಾ ಹಿಗ್ಗಿನಿಂದ ನಿಂತುದು. ಈ ಮಧ್ಯೆ ಕೃಷ್ಣಮೂರ್ತಿ ಬಾಯಿ ಹಾಕಿದ. ಕೃಷ್ಣಮೂರ್ತಿ ತಾನೂ ಕೊಂಚ ಕೊಂಚ ನಾಟಕ ರಂಗದ ಮೇಲೆ ಬಂದವನು. ಅವನಿಗೇನೋ ಬಹಳ ಆಸೆಯಿದ್ದರೂ ಅವನನ್ನು ಅಷ್ಟಾಗಿ ಯಾರೂ ಕರೆಯುತ್ತಿರಲಿಲ್ಲ. ಅವನಿಗೆ ಕೊಂಚ ಬಿಗುಮಾನ ಬೇರೆ. ಜತೆಗೆ ತನಗೆ ಅವಕಾಶ ಒದಗದ ನಿರಾಸೆ ಉಳಿದವರ ಮೇಲೆ ಅಸೂಯೆಯಾಗುತ್ತಿತ್ತು. ಉಳಿದವರು ಪಾತ್ರವಹಿಸಿದುದನ್ನು ಹೊಗಳಿಬಿಟ್ಟರೆ ಅವನಿಗೆ ಹೊಟ್ಟೆಗೆ ಬೆಂಕಿಯಿಟ್ಟಂತಾಗುತ್ತಿತ್ತು. ಯಾರನ್ನಾದರೂ ಹೊಗಳಿದರೆ ಸಾಕು, ಪಾಪ, ಪ್ರಾಣಿ ಮಿಲಮಿಲನೆ ಒದ್ದಾಡಿಬಿಡುತ್ತಿದ್ದ. ಕೂಡಲೇ ಅವರ ಮೇಲೆ ಬೆಂಕಿಯ ಸುರಿಮಳೆ. ಯಾರಾದರೂ ಚೆನ್ನಾಗಿ ಓದಿರುವರೆಂದರೆ "ಬಿಡೋ, ಬಿಡೋ, ಅವನೇನು ಓದಿರೋದು, ನಾನು

ಕಾಣದ್ದೇ'' ಎಂದು ಹಾರಿಸಲು ಯತ್ನಿಸುತ್ತಿದ್ದ. ಹಾಗೆಯೇ ಈಗ ಕೂಡ ಬಾಯಿಹಾಕಿದ.

'' ಏನೋ ಸುಮಾರು ಅಷ್ಟೇ. ಇನ್ನೂ ಅಭಿನಯದ ಕಲೆಯೇ ತಿಳಿಯದು''

''ಲೋ ನಿಜವಾಗಿ ಹೇಳೋ--''

'' ಅಷ್ಟೇ ಕಣೋ. ನೀವೆಲ್ಲಾ ಸುಮ್ಮನೆ ಹೊಗಳುತ್ತೀರಲ್ಲಾ. ಅಷ್ಟೇನೂ ಚೆನ್ನಾಗಿರಲಿಲ್ಲ. ಪರವಾಗಿಲ್ಲ''

'' ಪರವಾಗಿಲ್ಲವಂತೆ, ಸೊಗಸಾಗಿತ್ತು''

'' ಆ ಪಾತ್ರ ಇನ್ನೂ ಚೆನ್ನಾಗಿ ಮಾಡಬಹುದು ''

'' ನೀನು ಮಾಡ್ತೀಯಾ ಅಲ್ವೇ? '' ಎಂದು ರೇಗಿದೆ ನಾನು.

'' ಖಂಡಿತವಾಗಿಯೂ—''

'' ನಿನ್ನ ಹಣೇಲೇ ಬರೆದಿಲ್ಲ. ಇನ್ನು ಏಳೇಳು ಜನ್ಮ ತೆಕ್ಕೊಂಡು ಬಂದರೂ ಆಗೋಲ್ಲ''

''ನೀನು ಹಾಗೆಯೇ ಅಂದುಕೋ. ಅಷ್ಟೇ'' ಎಂದ ಕೃಷ್ಣಮೂರ್ತಿ ತಿರಸ್ಕಾರದಿಂದ.

ನನಗೆ ಇನ್ನೂ ರೇಗಿತು!

''ನಿನಗೆ ಹೊಟ್ಟೆಕಿಚ್ಚು ಕಣೋ-ನಮಗೆ ಗೊತ್ತಿಲ್ಲವೇ?''

'' ಹೌದು ಕಣಯ್ಯಾ. ಕಂಡದ್ದನ್ನು ಹೇಳಿದರೆ ನಿಮಗೆಲ್ಲಾ ಹಾಗೇ ಕಣ್ರೋ. ನಿಮಗೆಲ್ಲ ಏನೂಂದ್ರೆ ಯಾರಾದ್ರೂ ನಾಟಕದಲ್ಲಿ ಬಂದು ಪಾತ್ರ ವಹಿಸಿದರೆ ಅವರೇ ದೊಡ್ಡ ನಟರು. ಶುದ್ಧ ಹೀರೋವರ್ಷಿಪ್ (*Hero-worship*) ಅವನ ಕಾಲಿಗೆ ಬೀಳೋದೊಂದು ಬಾಕಿ! ನಾನೇನು ತಾನೇ ಹೇಳಿದ್ದಪ್ಪ ಈಗ. ಆ ಪಾತ್ರ ಇನ್ನೂ ಚೆನ್ನಾಗಿ ಮಾಡಬಹುದಿತ್ತು ಅಂತ. ಅವನು ನಿಜವಾಗಿಯೂ ಚೆನ್ನಾಗಿದಾನೆ. ಹೆಂಗಸು ಕಂಡ ಹಾಗೆ ಕಾಣ್ತಾನೆ. ಹೆಂಗಸಿನ ಪಾತ್ರ ಅವನಿಗೆ ಚೆನ್ನಾಗಿ ಒಪ್ಪುತ್ತೆ. ಸರಿಯೇ

ನಯ್ಯ. ಆದರೆ, ಅಭಿನಯ ಸಾಲದು. ನಮಗೆ ರಂಗದ ಮೇಲೆ ಗಾಜಿನ ಗೊಂಬೆ ಬೇಡ. ಅಭಿನಯಿಸುವ ಮನುಷ್ಯ ಬೇಕು. ಅವನಿಗೆ ಅದು ಸಾಲದು.

ನನಗೆ ಈ ಮಾತಿನಿಂದ ನಿಜವಾಗಿಯೂ ಉಳುಕಿತು. ಅವನ ವಿಷಯಕ್ಕೆ ನಾನೇನೋ ಪೂಜೆಯನ್ನು ಮನಸ್ಸಿನಲ್ಲೇ ಆರಂಭಿಸಿಬಿಟ್ಟುದರಿಂದಲೇ ನನ್ನ ಮನಸ್ಸು ಕೃಷ್ಣಮೂರ್ತಿಯ ಮಾತಿನಿಂದ ಕೆರಳಿತು.

"ಹೋಗೋ, ಹೋಗೋ. ಮಾತು ತಿರುಗಿಸುತ್ತಾನೆ, ಈಗ. ಅಭಿನಯ ಕಂಡಿರುವವನು ಇವನೊಬ್ಬನೇ" ಎಂದೆ ನಾನು ಬುಸುಗುಟ್ಟುತ್ತಾ.

"ಇಲ್ಲಪ್ಪ. ನಿನಗೇ ಚೆನ್ನಾಗಿ ಗೊತ್ತು, ಆಯಿತೇ. ವರದಾಚಾರಿ ಕಂಪನೀಲಿ ಹೆಂಗಸಿನ ಪಾರ್ಟು ಮಾಡುತ್ತಿದ್ದರು. ಪಾರ್ಟು ಅಂದರೆ, ಅದು. ಯಾಕೆ ಈಗ ಕೂಡ, ಆ ಸ್ಥಾನಂ ನರಸಿಂಗರಾವ್ ಇಲ್ಲವೇ ? ಅವನ ನಟನೆ, ಚಾತುರ್ಯ, ವೈಖರಿಯ ಮುಂದೆ ಇವೆಲ್ಲ ಯಾವ ಮೂಲೆಗೆ !"

ಕೃಷ್ಣಮೂರ್ತಿಯ ಈ ಮಾತಿನಿಂದ ನಾನು ಬಾಯಿ ಮುಚ್ಚಿಕೊಂಡರೂ, ಅವನ ಅಭಿಪ್ರಾಯವನ್ನು ನಾನು ಒಪ್ಪಿಕೊಳ್ಳಲಿಲ್ಲ. ಅವನ ಈ ಭಾವದಿಂದ ನನಗೆ ಒಂದು ಬಗೆಯ ಜುಗುಪ್ಸೆ. ಜತೆಗೆ ಒಂದು ಹಟಕೂಡ. ಪಾತ್ರದ ವಿಷಯ, ನಟನೆಯ ವಿಷಯ ಕೃಷ್ಣಮೂರ್ತಿಗೇನು ಗೊತ್ತು. ಹೊಟ್ಟೇಕಿಚ್ಚಿನಿಂದ ಅವನನ್ನು ಬಯ್ಯುತ್ತಿದಾನೆ ಎನಿಸಿ ಹಿಂದಿನ ದಿನದ ಪಾತ್ರದ ವಿಷಯವನ್ನೇ ಮತ್ತೆ ಯೋಚಿಸಲಾರಂಭಿಸಿದೆ. ಯೋಚಿಸಿದಷ್ಟು ಅವನು ಅದನ್ನು ನಿರ್ವಹಿಸಿದ ರೀತಿಯ ಸೊಗಸು ಹೆಚ್ಚುತ್ತಾ ಬಂತು. ಅವನ ಬಗೆಗೆ ನನಗಿದ್ದ ಗೌರವ ಇನ್ನೂ ಹೆಚ್ಚಾಯಿತು. ಹೇಗಾದರೂ ಮಾಡಿ ಅವನ ಗೆಳೆತನ ಸಂಪಾದಿಸಲೇ ಬೇಕು ಎಂದು ನನ್ನ ಆಸೆ. ಈಗ ಕೃಷ್ಣಮೂರ್ತಿಯ ತೆಗಳಿಕೆಯ ಮಾತಿನಿಂದ ಆ ಆಸೆಗೆ ಇಂಬು ಸಿಕ್ಕಿದಂತಾಯಿತು. ಹೇಗೇ ಆಗಲಿ ಅವನ ಸ್ನೇಹ ಪಡೆದೇ ತೀರುವೆನೆನ್ನುವ ಹಟ ಮೂಡಿತು.

ನಾವು ಮಾತನಾಡುತ್ತ ನಿಂತಿದ್ದ ಕಡೆಯಿಂದ ಅಯ್ಯರ್ ಹೋಟಲು ಕಾಣುತ್ತಿತ್ತು. ಅಲ್ಲಿಗೆ ಹೋಗೋಣವೆಂದು ಅಂದುಕೊಂಡು ಆ ಕಡೆ

ತಿರುಗಿದೆ. ಜತೆಗೆ ಹೋಟೆಲಿನಲ್ಲಿ ಅವನು ಕುಳಿತಿರುವುದೂ ಕಾಣಿಸಿತು. ಆಗ ಅವನನ್ನು ಕಂಡೊಡನೆಯೇ ನನ್ನ ಮನಸ್ಸು ಕುಣಿಯಹತ್ತಿತು. ಏನೋ ಒಂದು ಉಲ್ಲಾಸ, ಉತ್ಸಾಹ. ಅವನ ಹತ್ತಿರದಲ್ಲಿ ನಿಂತರೆ ಅಷ್ಟೇ ಸಾಕು ಎನ್ನುವ ಆಸೆ. ನನ್ನ ಸಹಪಾಠಿಗಳನ್ನು ಅಲ್ಲಿಯೇ ಬಿಟ್ಟು ಅಯ್ಯರ್ ಹೋಟೆಲಿಗೆ ನುಗ್ಗಿದೆ. ದೂರದಿಂದ ಅವನನ್ನೇ ದಿಟ್ಟಿಸುತ್ತಾ ನಡೆದೆ. ಇನ್ನೆಲ್ಲಿ ಅವನು ಎದ್ದು ಬಿಡುವನೋ ಎಂದು ನನಗೆ ಒಳಗೆ ಹೆದರಿಕೆ. ಹತ್ತಿರ ಬರುವವರೆಗೂ ಅವನಲ್ಲಿ ನಟ್ಟ ಕಣ್ಣನ್ನು ತೆರೆಯಲಿಲ್ಲ. ಹತ್ತಿರ ಬಂದೊಡನೆಯೇ ಅವನಿಗೆ ನಮಸ್ಕಾರ ಮಾಡೋಣವೆನಿಸಿತು. ಕೈ ತಾನೇತಾನಾಗಿ ಮೇಲೆದ್ದಿತು. ಆದರೆ ನನ್ನ ನಮಸ್ಕಾರಕ್ಕೆ ಅವನಿಂದ ಪ್ರತಿಯಾಗಿ ನಮಸ್ಕಾರ ಸಿಗುವುದಿರಲಿ, ಅದನ್ನು ಕಂಡೂ ಕಾಣದಂತೆ ಕುಳಿತಿದ್ದ. ನನ್ನ ಮನಸ್ಸು ನಿಜವಾಗಿಯೂ ಬಹಳ ನೊಂದುಕೊಂಡಿತು. ಅವನಿಗೆ ಇಷ್ಟೊಂದು ಜಂಭವಿದೆಯೆಂದು ನಾನು ಎಣಿಸಿರಲಿಲ್ಲ. ಹಿಂದಿನ ರಾತ್ರಿಯದನ್ನು ನಾನಾಗಲೇ ಮರೆತುಬಿಟ್ಟಿದ್ದೆ. ಈಗ ಅದೂ ನೆನಪಾಯಿತು. (ಪ್ರೇಮೀತರುಣನ ಪ್ರೇಮವನ್ನು ಕಾಮಿನಿಯು ತಿರಸ್ಕರಿಸಿದಾಗ ಅವನಿಗಾಗುವಷ್ಟೇ ನೋವು ನನಗಾಯಿತು.) ಅವನ ವಿಷಯಕ್ಕೆ ನನಗೆ ಎಲ್ಲೂ ಇಲ್ಲದ ಗೌರವ. ಆ ಮಹಾ ಗೌರವದ ಕುರುಹು ಈ ನಮಸ್ಕಾರ. ಅದನ್ನೇ ಅವನು ಒಲ್ಲದಿದ್ದರೆ! ನನ್ನ ಉತ್ಸಾಹವೆಲ್ಲ ಮಣ್ಣುಪಾಲಾದಂತಾಯಿತು. ನನಗೆ ನಾನೇ 'ಅಯ್ಯೋ' ಎಂದುಕೊಂಡೆ. ಬಂದ ತಪ್ಪಿಗೆ ಒಂದಿಷ್ಟು ಕಾಫಿಯನ್ನಾದರೂ ಬಸಿದುಕೊಂಡು ಹೋಗೋಣವೆಂದುಕೊಂಡು ಕುಳಿತುಕೊಳ್ಳಲು ಸ್ಥಳ ಹುಡುಕಿದೆ. ಅವನು ಕುಳಿತ ಮೇಜಿನ ಆ ಪಕ್ಕಕ್ಕೆ ಒಂದು ಕುರ್ಚಿಯಿತ್ತು. ಅಲ್ಲಿಯೇ ಕುಳಿತುಕೊಂಡರಾಯಿತೆಂದುಕೊಂಡು ಆ ಕಡೆ ಹೋದೆ. ಇದುವರೆಗೂ ನನಗೆ ಬೆನ್ನು ಮಾಡಿಕೊಂಡು ಕುಳಿತಿದ್ದವರ ಮುಖ ಕಾಣಿಸಿತು. ಕುಳಿತಿದ್ದವರು ಮತ್ತಾರೂ ಅಲ್ಲ. ನಮ್ಮ ಹೈಸ್ಕೂಲಿನ ಉಪಾಧ್ಯಾಯರು— ಶಿವಸ್ವಾಮಿ!

ನನ್ನ ಮನಸ್ಸಿನ ಬೇಸರದಲ್ಲಿ ಅವರನ್ನು ಮಾತಾಡಿಸುವಷ್ಟು ನನಗೆ ಸಮಾಧಾನವಿರಲಿಲ್ಲ. ಅವನ ಪಕ್ಕದಲ್ಲಿದ್ದ ಕುರ್ಚಿಯ ಮೇಲೇನೋ ಕುಳಿತೆ. ಆದರೆ ಕುಳಿತುಕೊಳ್ಳುವಾಗ ಕೊಂಚ ಹಿಂಜರಿದೆ. ಅಲ್ಲಿ ಕುಳಿ

ತಿರಲು ಒಳ್ಳೆಯ ಅವಕಾಶ ಸಿಕ್ಕಿತಲ್ಲಾ, ಅವನೊಂದಿಗೆ ಕಾಣಿಸಿಕೊಳ್ಳಬಹುದಲ್ಲಾ ಎಂದು ಮನಸ್ಸಿಗೇನೋ ಹಿಗ್ಗು. ಆದರೂ ಏನೋ ಒಂದು ಬಗೆಯ ಸಂಕೋಚ. ಅದಕ್ಕೆ ಸರಿಯಾಗಿ ಅವನೂ ಕರ್ಚಿಯನ್ನು ಪಕ್ಕಕ್ಕೆ ಜರುಗಿಸಿಕೊಂಡ. ನನಗೆ ಬಹಳ ಹತ್ತಿರದಲ್ಲಿ ಕುಳಿತರೆ ತನ್ನ ಗೌರವಕ್ಕೆ ಕುಂದು ಎಂದುಕೊಂಡಿರಬೇಕು. ಶಿವಸ್ವಾಮಿ ಒಂದೇ ಸಮನಾಗಿ ಮಾತಿನ ಮಳೆ ಸುರಿಸಿದರು. ಅವರೇನು ಮಾತನಾಡಿದರೋ ಏನೋ. ಅದು ನನಗಂತೂ ತಿಳಿಯದು. ನನ್ನ ಕಣ್ಣು, ಮನಸ್ಸೆಲ್ಲಾ ಅವನ ಮೇಲೆಯೇ! ಅವನು ಕಣ್ಣು ಮಿಟುಕಿಸುವ ಬಗೆ, ಅವನ ಕಣ್ಣಿನ ಬಣ್ಣ, ಅವನು ಮುಖ ಕ್ಷೌರ ಮಾಡಿಕೊಂಡಿರುವನೇ ಇಲ್ಲವೇ, ಅವನು ಹೇಗೆ ನಗುತ್ತಾನೆ, ಅವನು ಕತ್ತನ್ನು ಹೇಗೆ ಓರಯಿಸುತ್ತಾನೆ, ಈಗ ಅವನೇನು ಯೋಚಿಸುತ್ತಿರಬಹುದು-ಇದರಲ್ಲೇ ನನ್ನ ಮನಸ್ಸು ಮಗ್ನವಾಗಿತ್ತು. ಅಂತಹುದರಲ್ಲಿ ಶಿವಸ್ವಾಮಿ ಆಡಿದ ಮಾತಿಗೆ ಉತ್ತರಕೊಡುವುದಾದರೂ ಕಷ್ಟವೇ ಆಗಿತ್ತು. ಅವರು ಒಂದು ಯುಗ ಹಾಗೆ ಮಾತಾಡಿದರೆಂದು ನನಗೆ ಅನಿಸಿತ್ತು. ಆ ಮೇಲೆ ನನ್ನನ್ನು ಅವನಿಗೆ ಪರಿಚಯ ಮಾಡಿಕೊಟ್ಟರು. ಪರಿಚಯ ಮಾಡಿಕೊಡುವಾಗ ಇಬ್ಬರೂ ನಮಸ್ಕರಿಸುವುದೋ ಕೈಕುಲುಕುವುದೋ ಪದ್ಧತಿ. ಆದರೆ ಅವನು ಒಂದುಬಾರಿ ಕೆಳ ತುಟಿಯನ್ನು ಓರೆಮಾಡಿದುದೆಷ್ಟೋ ಅಷ್ಟೆ. ಅದರಿಂದಲೇ ನಾನು ತೃಪ್ತಿ ಪಡಬೇಕಾಯಿತು.

"ಇವನು ಮಹಾರಾಜ ಹೈಸ್ಕೂಲಿನಲ್ಲಿ ನನ್ನ ಶಿಷ್ಯ. ಒಂದು ದಿನವಾಗಲಿ ಹೊತ್ತಿಗೆ ಸರಿಯಾಗಿ ಬಂದವನಲ್ಲ. ಶುದ್ಧ ಸೋಮಾರಿ. ಆದರೆ ಬುದ್ಧಿವಂತ. ಆರನೆಯ ರ್‍ಯಾಂಕ್ ಇವನದೇ" ಎಂದರು.

ಅವರು ನನ್ನನ್ನು ಬೈದರೂ ನನಗೆ ಕೋಪ ಬರಲಿಲ್ಲ. ಒಂದು ಬಗೆಯ ಸಂತೋಷವೇ! ನನಗೆ ಅವನ ಪರಿಚಯ ಮಾಡಿಕೊಟ್ಟರಲ್ಲ, ಅಷ್ಟೇ ಸಾಕು ಎನಿಸಿತು. ಅದೂ ಅಲ್ಲದೆ ಅವರ ಸ್ವಭಾವವೂ ಹಾಗೆಯೇ. ಒಂದೇ ಉಸುರಿನಲ್ಲಿಯೇ ಹೊಗಳುವುದು ಬೈಯುವುದು. ಯಾವಾಗಲೂ ನಗುನಗುತ್ತ ಎಲ್ಲರ ಜೊತೆಯಲ್ಲಿಯೂ ಸಮಾನತೆಯಿಂದ ಓಡಾಡುತ್ತಿ

ದ್ದರು. ಇದರಿಂದ ಹುಡುಗರಿಗೆಲ್ಲಾ ಅವರನ್ನು ಕಂಡರೆ ಗೌರವಕ್ಕಿಂತ ಹೆಚ್ಚು ವಿಶ್ವಾಸ. ಅವರು ಬೈದರೂ ಅದನ್ನು ಯಾರೂ ಮನಸ್ಸಿಗೆ ಹಚ್ಚಿ ಕೊಳ್ಳುತ್ತಲೇ ಇರಲಿಲ್ಲ.

"ಇವರು ನಿನಗೆ ಗೊತ್ತೇ ಇದೆ. ಶ್ಯಾಮಸುಂದರ್" ಎಂದರು ಅವನ ಪರಿಚಯ ಮಾಡಿಕೊಡುತ್ತಾ. ನನ್ನನ್ನು ಏಕವಚನದಲ್ಲಿ, ಅವನನ್ನು ಬಹುವಚನದಲ್ಲಿ ಪರಿಚಯ ಮಾಡಿಕೊಟ್ಟದ್ದೂ ನನಗೆ ಅಳುಕಿತು; ಆದರೂ ನಾನು ಹಿಗ್ಗಿನಿಂದಲೇ ಕೈ ನೀಡಿದೆ. ಕೈಕುಲುಕಲು ನಾನು ನೀಡಿದ ಕೈ ಅಲ್ಲಿಯೇ ನಿಂತಿತು. ಆ ಕೈ ನೀಡಲಿಲ್ಲ. ಕೊನೆಗೆ ಈ ಅವಮಾನವನ್ನು ನುಂಗಿಕೊಳ್ಳಲು, ನೀಡಿದ ಕೈಯಿಂದ ಒಂದು ಲೋಟ ತೆಗೆದುಕೊಂಡು ಅದರಲ್ಲಿದ್ದ ನೀರನ್ನೆಲ್ಲಾ ಗಟಗಟನೆ ಕುಡಿದೆ. ತನ್ನನ್ನೇನೂ ಪರಿಚಯ ಮಾಡಿಕೊಡುವ ಅವಶ್ಯಕತೆಯಿಲ್ಲ. ತಾನು ಯಾರೆಂಬುದು ಎಲ್ಲರಿಗೂ ಗೊತ್ತು ಎನ್ನುವ ಅಹಂಕಾರ ಅವನ ಮುಖದ ಮೇಲೆ ಚೆನ್ನಾಗಿ ಕಾಣುತ್ತಿತ್ತು. ತಾನು ನಮ್ಮೆಲ್ಲರಿಗಿಂತಲೂ ಬಹಳ ಮೇಲುಮಟ್ಟದಲ್ಲಿ ರುವವನೆನ್ನುವ ಹೆಡಸೂ ಅವನಲ್ಲಿತ್ತು. ನಮ್ಮ ಮಾತಿಗೊಂದಕ್ಕೂ ಅವನು ಸೇರಲೇ ಇಲ್ಲ. ನಾನೇನೋ ಅವನನ್ನು ಮಾತಾಡಿಸಲು ಯತ್ನಿಸಿ ವಿಫಲನಾದರೂ ಪ್ರಯತ್ನ ಮಾತ್ರ ಬಿಡಲಿಲ್ಲ.

"ನಿನ್ನೆ ನಿಮ್ಮ ಪಾತ್ರ ಬಹಳ ಚೆನ್ನಾಗಿತ್ತು" ಎಂದೆ

ಅವನು ಮಾತನಾಡಲಿಲ್ಲ. ಬದಲಿಗೆ ಮುಖದ ಮೇಲೊಂದು ಕಿರುನಗೆಯ ನೆರಳು ಮಾತ್ರ ಮೂಡಿ ಮಾಯವಾಯಿತು. "ನಾನು ಮಾಡಿದ ಮೇಲೆ ಚೆನ್ನಾಗದೆ ಮತ್ತೇನು" ಎಂಬ ಭಾವನೆ ಆ ನೋಟದಲ್ಲಿ ತುಂಬಿ ತುಳುಕುತ್ತಿತ್ತು.

ನನ್ನ ಮಾತು ಕೇಳಿದೊಡನೆಯೇ ಶಿವಸ್ವಾಮಿ ಅವನನ್ನು ಹೊಗಳಲಾರಂಭಿಸಿಬಿಟ್ಟರು. ಚಿಕ್ಕವನಾಗಿದ್ದಂದಿನಿಂದಲೂ ಅವನಿಗೆ ನಾಟಕಗಳಲ್ಲಿ ಅಭಿರುಚಿ. ನಾಟಕದ ಅಭಿನಯದಲ್ಲಿ ಆಗಿನಿಂದಲೂ ಹೆಸರು ಪಡೆದವನು. ಹೈಸ್ಕೂಲಿನಲ್ಲಿದ್ದಾಗ ಅವನೂ ಅವನ ಚಿಕ್ಕ ತಂಗಿಯೂ ಸೊಗಸಾಗಿ ಋಷ್ಯಶೃಂಗ- ಶಾಂತಾ ದೃಶ್ಯ ಅಭಿನಯಿಸಿದ್ದರು. ಆಗ ಜಿಲ್ಲಾಧಿ

ಕಾರಿಗಳೇ ಅವರನ್ನು ಮೆಚ್ಚಿ ಬಹುಮಾನ ಕೊಟ್ಟರು. ಅನಂತರ ಶ್ಯಾಮು ನಿಗೆ ದಿನೇ ದಿನೇ ನಾಟಕದಲ್ಲಿ ಆಸಕ್ತಿ ಹೆಚ್ಚುತ್ತಾ ಬಂತು. ಈಗ ಮೈಸೂರಿನಲ್ಲೆಲ್ಲಾ ಅವನಂತಹ ನಟನಿನ್ನಿಲ್ಲ. ಮುಂದೆ ಪ್ರಪಂಚದ ನಟಶ್ರೇಣಿಯಲ್ಲಿ ಶ್ಯಾಮುನೂ ಒಬ್ಬನಾಗಿಯೇ ತೀರುತ್ತಾನೆ. ಅವನ ಭವಿಷ್ಯ ಅಷ್ಟು ಉಜ್ವಲವಾದುದೆಂದೂ ಶಿವಸ್ವಾಮಿ ಹೇಳಿದರು. ಪಾಪ! ಅವರಿಗೆ ಶ್ಯಾಮುನ ಪರಿಚಯವಾಗಿ ಇನ್ನೂ ಮೂರು ನಾಲ್ಕು ತಿಂಗಳಾಗಿತ್ತೋ ಇಲ್ಲವೊ!

ಯಾರಾದರೂ ನಮ್ಮನ್ನು ಎದುರಿಗೇ ಹೊಗಳುತ್ತಿದ್ದರೆ, ಕೇಳುವುದು ಇಷ್ಟವಾದರೂ ಕಷ್ಟ. ನಮಗೇ ಒಂದು ಬಗೆಯ ಸಂಕೋಚವಾಗುತ್ತದೆ. ಆ ಹೊಗಳಿಕೆ ನಮಗೆ ಎಷ್ಟೇ ಸಿಹಿಯಾಗಿದ್ದರೂ, ಅದರಲ್ಲಿ ಹತ್ತರಲ್ಲೊಂದು ಪಾಲು ನಿಜ, ಉಳಿದುದೆಲ್ಲ ಕಟ್ಟುಕತೆಯೆಂದು ನಮಗೆ ಗೊತ್ತಿರುತ್ತದೆ. ಅದರಿಂದ ನಮಗೆ ನಮ್ಮನ್ನು ಹೊಗಳುವವರ ವಿಷಯವಾಗಿ ಸಂತೋಷ, ಗೌರವದ ಬದಲು ಅಸಡ್ಡೆ ಬರುತ್ತದೆ. ಬೈಯುವುದಿದ್ದರೆ ಎದುರಿಗೆ ಬೈಯಬೇಕು. ಹೊಗಳುವುದಿದ್ದರೆ ಹಿಂದೆ ಹೊಗಳಬೇಕು.

ಶ್ಯಾಮುನಿಗೆ ಯಾವ ಸಂಕೋಚವೂ ಆದಂತೆ ತೋರಲಿಲ್ಲ. ಇವರು ಹೊಗಳುತ್ತಿರುವುದೇನೂ ಹೆಚ್ಚಲ್ಲ. ಇಷ್ಟಾಗಿ ಆ ಹೊಗಳಿಕೆ ನನ್ನ ಹಕ್ಕು. ಇವರು ಹೊಗಳಿದರೆಷ್ಟೋ ಬಿಟ್ಟರೂ ಅಷ್ಟೇ. ನನ್ನ ಹೆಸರು ಈಗಾಗಲೇ ಎಲ್ಲರ ಬಾಯಲ್ಲೂ ಇದೆ ಎಂಬ ಸ್ವಸಂತೋಷ- ಆತ್ಮತೃಪ್ತಿ. ಹೊಗಳಿಕೆಯಿಂದಾದ ಸಂತೋಷವನ್ನು ಹೊರತೋರದಂತೆ ಮೇಲೆ ಅಹಂಕಾರದ, ಅಸಡ್ಡೆಯ ಪರದೆಯಿತ್ತು.

ಸದ್ಯ ಕಾಫಿ ಬಂತು. ಇಲ್ಲದಿದ್ದರೆ ಶಿವಸ್ವಾಮಿಯ ಮಾತು ಮುಗಿಯುತ್ತಿತ್ತೋ ಇಲ್ಲವೋ. ಕಾಫಿಯ ಲೋಟವನ್ನು ತನ್ನ ಮುಂದಿನಿಂದ ಆ ಕಡೆಗೆ ಸರಿಸಿದ ಶ್ಯಾಮು. ತಾನಾಗಿಯೇ "ಹಾಲು ತೆಗೆದುಕೊಂಡು ಬಾ" ಎನ್ನಲು ಕೂಡ ಬಿಗುಮಾನ. ಕೊನೆಗೆ ಶಿವಸ್ವಾಮಿಯೇ ಅವನಿಗೆ ಹಾಲು ತರಿಸಿಕೊಟ್ಟರು.

"ಯಾಕೆ, ಶ್ಯಾಮ್, ನೀವು ಕಾಫಿ ಕುಡಿಯುವುದಿಲ್ಲವೆ?" ಎಂದರು ಶಿವಸ್ವಾಮಿ. ಶ್ಯಾಮ್ "ಇಲ್ಲ" ಎಂದು ಒಂದು ಸಾರಿ ಅವರನ್ನೇ ದುರು

ಗುಟ್ಟಿಕೊಂಡು ನೋಡಿದ. (ಯಾವಳಾದರೂ ಪ್ರತಿಷ್ಠ ಹೆಣ್ಣನ್ನು ಅವಳ ವಯಸ್ಸೆಷ್ಟೆಂದು ಕೇಳಿದರೆ, ಅಕಾರ್ಯ ಮಾಡಿದಂತೆ, ಆಡಬಾರದುದನ್ನು ಆಡಿದಂತೆ, ಕೇಳಿದವರನ್ನು ತಿಂದುಬಿಡುವಂತಿರುವುದಿಲ್ಲವೆ ನೋಟ, ಹಾಗಿತ್ತು ಶ್ಯಾಮ್ ನೋಡಿದ ಬಗೆ.)

"ಕಾಫಿ ಕುಡಿವರೆ ಕಪ್ಪಾಗಿಬಿಡುವ ಹೆದರಿಕೆ ಇವನಿಗೆ" ಎಂದು ಕೊಂಡೆ ನಾನು ಮನಸ್ಸಿನಲ್ಲೇ.

"ಯಾಕೆ ನಿಮ್ಮ ಮೈಗೆ ಒಗ್ಗುವುದಿಲ್ಲವೆಂದು ಕಾಣುತ್ತೆ. ನಮ ಗಂತೂ ಕಾಫಿ ಇಲ್ಲದಿದ್ದರೆ ಕೆಲಸವೇ ಆಗುವಂತಿಲ್ಲ. ಮೋಟಾರಿಗೆ ಪೆಟ್ರೋಲ್ ಇದ್ದಹಾಗೆ" ಎಂದರು ಶಿವಸ್ವಾಮಿ ನಗುತ್ತಾ.

ಅವರ ನಗು ನೀವು ಕೇಳಿಲ್ಲವೇನೋ. ಅವರ ನಗುವನ್ನು ಯಾವು ದಕ್ಕೂ ಹೋಲಿಸುವುದಕ್ಕಾಗುವುದಿಲ್ಲ. ಬಿಕ್ಕಿ ಬಿಕ್ಕಿ ಅಳುವ ಹಾಗೆಯೇ ಬಿಕ್ಕಿ ಬಿಕ್ಕಿ ನಗುತ್ತಾರೆ. ಮೋಟರನ್ನು ಬಿಡಲು ಆರಂಭಿಸಿದಾಗ ಸದ್ದಾ ಗುವುದಲ್ಲಾ ಅದೇ ತರಹ ಅವರ ನಗೆಯ ದನಿ. ಆ ನಗು ಹೊಟ್ಟೆಯ ಆಳದಿಂದ ಬಂದು ಅವರ ಮೈಯನ್ನೆಲ್ಲ ಕುಣಿಸಿಬಿಡುತ್ತದೆ. ಅವರು ನಗು ವುದನ್ನು ನೋಡುವುದೇ ಒಂದು ಆನಂದ.

ಮತ್ತೆಲ್ಲಿ ಅವರು ಮಾತಾಡಲು ಆರಂಭಿಸಿಬಿಡುವರೋ ಎಂದು ನಾನು ಹೆದರಿದೆ. ಅವರ ಮಾತು, ಈಕಡೆ ಶ್ಯಾಮನ ಗಂಭೀರ ಮೌನ. ಇವೆರಡರ ನಡುವೆ ನನಗಂತೂ ಬಹು ಬೇಸರವಾಗಿತ್ತು.

ಶಿವಸ್ವಾಮಿಯ ಕೈಯಿಂದ ತಪ್ಪಿಸಿಕೊಂಡು ನಾವಿಬ್ಬರೂ ಕಾಲೇಜಿನ ಕಡೆಗೆ ಹೊರಟೆವು. ನಾವು ಹೋಗುವಾಗ ಮಹಾರಾಜಾ ಕಾಲೇಜಿನ ಒಳಹಾದಿಯಿಂದಲೇ ಹೋಗಬೇಕು. ಅಲ್ಲಿ ಹೋಗುವಾಗ ನಮ್ಮ ಕಣ್ಣು ಕಿವಿಗಳೆರಡೂ ಬಹಳ ಚುರುಕಾಗಿ ಕೆಲಸಮಾಡುತ್ತವೆ. ಅದು ತಪ್ಪು, ಹಾಗಿರಕೂಡದೆಂದು ನಮಗೆ ಎಷ್ಟೋ ಜನ ಬೋಧಿಸಿದ್ದಾರೆ, ಬೈದಿದ್ದಾರೆ. ಆದರೆ ನಾವು ಮಾತ್ರ ಅದಕ್ಕೆ ಕೊಂಚವೂ ಗಮನವನ್ನೇ ಕೊಡುತ್ತಿರಲಿಲ್ಲ. ಕೊಂಚ ಬಳೆಯ ಜಣಕಾರ ಬಿತ್ತೆಂದರೆ ಕಿವಿ ನೆಟ್ಟಗಾಗುತ್ತದೆ. ಕಣ್ಣು ಸೊಟ್ಟಗಾಗುತ್ತದೆ ಓರೆನೋಟದಲ್ಲಿ. ನನಗೆ ಈಗ ಕೂಡ ಅವರು ಮುಡಿದ

ಹೂಗಳ ಪರಿಮಳ, ಮೈಗೆ ಹಾಕಿದ್ದ ಶೃಂಗಾರ ವಸ್ತುಗಳ ಪರಿಮಳ ಕುಸುರುಕುಸುರಾಗಿ ನೆನಪಾಗುತ್ತದೆ. ನಮ್ಮ ಉಪಾಧ್ಯಾಯರು ನಮ್ಮನ್ನು ಈ ವಿಷಯಕ್ಕೆ ಸಿಕ್ಕಿದಂತೆಲ್ಲಾ ಬೈದಿದಾರೆ. ಆದರೆ ಅವರೂ ನಮ್ಮಂತೆಯೇ. ಎಷ್ಟಿದ್ದರೂ ಅವರೂ ಗಂಡಸರಲ್ಲವೇ! ಗಂಡಸರೆಂದಮೇಲೆ ಅವರಿಗೂ ಕಣ್ಣು ಓಡಾಡುವುದು ಸಹಜ. ಆದರೆ ಅದನ್ನು ಮುಚ್ಚಿಡುವುದು, ಗುಟ್ಟಾಗಿ ನೋಡುವುದು, ಉಳಿದವರು ಎಲ್ಲರಿಗೂ ಕಂಡಂತೆ ದಿಟ್ಟಿಸಿದರೆ ಅವರನ್ನು ಬೈಯುವುದು— ಇದು ಮಾತ್ರ ನಮಗೆ ಒಪ್ಪಿಗೆಯಿಲ್ಲ. ಅದಕ್ಕೇ ಮತ್ತೆ ನಮ್ಮ ಮುಳ್ಳುಮುಖದ ಸಂಪತ್ತು ಅವರಿಗೆ ಹಾಗೆ ಬೇಸ್ತು ಬೀಳಿಸಿದ್ದು.

ಸಂಪತ್ತು ಕಾಲೇಜಿನಲ್ಲೆಲ್ಲಾ ಪ್ರಸಿದ್ಧಿ—ಕೆಟ್ಟ ಮಾತಾಡುವುದಕ್ಕೆ. ಅವಾಚ್ಯ ಶಬ್ದಗಳ ವಸ್ತುಕೋಶ ಅವನೇ! ಯಾವುದೇ ಹುಡುಗಿಯನ್ನು ಕಂಡರೂ ಏನಾದರೂ ಒಂದು ಕುಚೋದ್ಯ, ಕೆಟ್ಟ ಮಾತು. ಅವಳು ಹೀಗೆ, ಅವಳು ಹಾಗೆ ಎಂದು ಹೇಳಿಬಿಡುತ್ತಿದ್ದ. ನಮಗೆ ಆ ತರಹ ಮಾತೆಂದರೆ ಬಹಳ ಆಸಕ್ತಿ. ನಾವೆಲ್ಲಾ ಬಾಯಿ ಬಿಟ್ಟುಕೊಂಡು ಕೇಳುತ್ತಿದ್ದೆವು. ಅವನು ಅವರನ್ನೆಲ್ಲಾ ಅಂದರೆ ನಮಗೊಂದು ಬಗೆಯ ಸಂತೋಷ. ಅವನು ಉಪಾಧ್ಯಾಯರನ್ನೂ ಬಿಟ್ಟಿರಲಿಲ್ಲ. ಅವರಿವರ ವಿಚಾರ ಹೇಗೋ ತಿಳಿದುಕೊಂಡು ರೇಗಿಸುತ್ತಿದ್ದ. ಒಂದು ದಿನ ಒಬ್ಬರು ಸಂಪತ್ತುವನ್ನು ಉದ್ದೇಶಿಸಿ ಉಪದೇಶ ಮಾಡಿದರು. ಹುಡುಗರು ಮಾನ ಮರ್ಯಾದೆ ಇಟ್ಟುಕೊಳ್ಳಬೇಕು, ತಗ್ಗಿಬಗ್ಗಿ ನಡೆಯಬೇಕು. ಮೈಯಷ್ಟೇ ಅಲ್ಲ ಮನಸ್ಸೂ ಶುದ್ಧಿಯಿರಬೇಕೆಂದು. ಅವರ ಮಾತು ಕೇಳುವಾಗೆಲ್ಲ ನಮಗೆ ನಗು. ಅವರೇ ಹುಡುಗಿಯರ ಕಡೆಗೆ ಕದ್ದು ಕದ್ದು ನೋಡಿದುದನ್ನು ನಾವೇ ಎಷ್ಟೋ ಬಾರಿ ಕದ್ದು ನೋಡಿದ್ದೆವು. ಸಂಪತ್ತುಗೆ ಅವರ ಮಾತಿನಿಂದ ರೇಗಿತ್ತು. ನಾವೂ ಛೂ ಬಿಟ್ಟೆವು. ಅವರು ಮಧ್ಯಾಹ್ನ ಮನೆಯ ಕಡೆಗೆ ಹೋಗುತ್ತಿರುವಾಗ ಅವನು ಹಿಂದಿನಿಂದ ಬೀಗದ ಕೈಗೊಂಚಲನ್ನು ಅಲ್ಲಾಡಿಸಿದ. ಗೊತ್ತೇ ಇದೆ. ಆ ಸದ್ದು ಕೇಳಿ ಅವರು ಹಿಂತಿರುಗಿ ನೋಡಿದರು. ಬೇಸ್ತು ಬಿದ್ದರು.

*

೩೦

ಈ ಮಾತು ಯಾಕೆ ಹೇಳುತ್ತಿದ್ದೇನೆಂದರೆ ನಾವು ಎಲ್ಲಿ ನಡೆದರೂ ಅಕ್ಕಪಕ್ಕದಲ್ಲಿ ಯಾರಾದರೂ ಬಳಿಗಾತಿಯರಿದ್ದಾರೆಯೇ ಎಂದು ನೋಡಿ ಕೊಂಡು ಹೋಗುವುದು ಪದ್ಧತಿ. ನಮಗೇನೋ ಅದರಲ್ಲಿ ಸಂತೋಷ. ಕಣ್ಣಿಗೆ ತಂಪು. ಮನಸ್ಸಿಗೂ ಕೊಂಚ ತಂಪು. ಅವರೂ ನಮ್ಮ ಕಣ್ಣಿಗೆ ಬೀಳಲೆಂದೇ ಬಣ್ಣಬಣ್ಣದ ಬಟ್ಟೆ ತೊಡುವುದು. ಶೃಂಗಾರ ಸಾಧನ ಉಪ ಯೋಗಿಸುವುದು. ಅದು ಅವರಿಗೆ ಚೆನ್ನ. ನಮ್ಮ ಕಣ್ಣಿಗೂ ಚೆನ್ನ. ದೂರದಿಂದ ಒಂದೆರಡು ಸಾರಿ ಅವರನ್ನು ನೋಡಿಯೇ ಸಂತೋಷಪಡುವ ಸ್ವಭಾವ ನನ್ನದು. ಉಳಿದವರಿಗೆ ಹೇಗೋ ತಿಳಿಯದು.

ನಾವು ಹೋಗುತ್ತಿದ್ದಂತೆ ಕಾಮನ ಬಿಲ್ಲೊಂದು ನಮ್ಮ ಪಕ್ಕದ ಕೋಣೆಯಿಂದ ಸರಿದು ಬಂದಂತಾಯಿತು. ನಾನು ಶ್ಯಾಮನ ಮುಖವನ್ನೇ ನೋಡುತ್ತಿದ್ದೆ. ಅವರೆಲ್ಲರೂ ತನ್ನನ್ನೇ ನೋಡುತ್ತಿರುವರೆಂಬ ಭಾವನೆ ಅವನ ಮುಖದಲ್ಲಿತ್ತು. ಆ ಅಹಂಕಾರದಲ್ಲಿ ಮೈ ಸೆಟೆದುಕೊಂಡು ಹೆಜ್ಜೆ ಹಾಕುತ್ತಿದ್ದ. ನಡಿಗೆಯಲ್ಲಿ ಹೊಸ ಗಾಂಭೀರ್ಯ ತರಲು ಪ್ರಯತ್ನಿಸಿದ. ಕಣ್ಣಿನ ನೋಟ ಮಾತ್ರ ಅವರ ಮೇಲೆಯೇ. ಎಷ್ಟಿದ್ದರೂ ಅವನು ಕಲೋ ಪಾಸಕ! ಆದರೆ ಆ ಸಮಯದಲ್ಲಿ ನನಗೆ ಹಾಗನ್ನಿಸಲಿಲ್ಲ. ಅವನ ಮೇಲೆ ಕೋಪ ಬಂತು. ಹುಡುಗಿಯರೆಲ್ಲ ಅವನನ್ನೇ ನೋಡುತ್ತಿದ್ದಾರೆ. ಮೆಚ್ಚುತ್ತಿದ್ದಾರೆ. ನನ್ನನ್ನು ಯಾರೂ ಕಣ್ಣೆತ್ತಿ ಸಹ ನೋಡುವುದಿಲ್ಲ. ನಾನೇನೂ ನೋಡಬೇಕಾದಂತಹ ವ್ಯಕ್ತಿಯೂ ಅಲ್ಲವೆಂಬುದು ನನಗೆ ಗೊತ್ತು. ಅದೂ ಒಂದು ಕಾರಣವಿರಬಹುದು. ಅಂತೂ ಆ ಕ್ಷಣದಲ್ಲಿ ಅವನ ಬಗ್ಗೆ ನನಗೆ ಮೈಯೆಲ್ಲಾ ಬೆಂಕಿಯಾಯಿತು. ಅವನ ನೋಟ ವೇನೋ ಅವರ ಮೇಲೆಯೇ. ಅವರು ತನ್ನನ್ನೇ ನೋಡುತ್ತಿರುವರೆಂಬುದೂ ಅವನಿಗೆ ಗೊತ್ತು. ಅದರಿಂದ ಅವನ ಜಂಭಕ್ಕೆ ಮಿತಿಯೇ ಇರಲಿಲ್ಲ. ಹುಂಜ ಕೋಳಿಗಳ ಮುಂದೆ ಪುಕ್ಕ ಕೆದರಿಕೊಂಡು ಕತ್ತನ್ನು ಮೇಲೆತ್ತಿ ಕೊಂಡು ನಡೆಯುವಂತೆ ಮುಂದೆ ನಡೆದ.

ನಾವು ಕಾಲೇಜಿನ ಪಕ್ಕದಲ್ಲಿರುವ ಬೇವಿನ ಮರದ ಬಳಿ ಬಂದೆವು. ಶ್ಯಾಮ್ ನನ್ನೊಂದಿಗೆ ಮಾತನಾಡದೆ ಹಾಗೆಯೇ ಮುಂದಕ್ಕೆ ಹೊರಟು ಹೋದ. ಹೋಗುವಾಗ ''ಹೋಗುತ್ತೇನೆ'' ಎಂದು ಕೂಡ ಹೇಳಲಿಲ್ಲ.

ಅವನು ಆ ಕಡೆ ಹೋದಂತೆ ಅವನ ಮೇಲೆಯೇ ನನ್ನ ದೃಷ್ಟಿ. ರಂಗದ ಮೇಲೆ ಹೆಣ್ಣಾಗಿ ಕಾಣುವ ಅವನು ನಿಜವಾಗಿಯೂ ನೋಡಲು ಅಂದವಾಗಿದ್ದ. ಹಿಂದಿನಿಂದ ಅವನನ್ನು ನೋಡಿದೆ. ಆ ಮೈ, ಆಕೃತಿ ಚೆನ್ನಾಗಿ ರೂಪಿತವಾಗಿತ್ತು. ಈಚೆಗೆ ಯಾವುದೋ ಕಲೆಯಮೇಲಿನ ಪುಸ್ತಕವನ್ನೋದುತ್ತಿದ್ದಾಗ (*Rhythm of the body*) ಅಂತ ಓದಿದೆ. ಆ ಮಾತು, ಮೈ ಸಾಮರಸ್ಯ, ಅವನಿಗೆ ಸೊಗಸಾಗಿ ಒಪ್ಪುತ್ತಿತ್ತು. ಹದವಾಗಿ, ಹವಣಾಗಿ, ಚೊಕ್ಕವಾಗಿ, ಒಪ್ಪವಾಗಿತ್ತು ಅವನ ಮೈಕಟ್ಟು. ಅಂತಹವನು ನನಗೆ ಸ್ನೇಹಿತನಾದನಲ್ಲ ಎಂದು ನನಗೆ ಕೊನೆಗಾಣದ ಆನಂದ. ಅವನು ನನ್ನನ್ನು ಅಹಂಕಾರದಿಂದ, ತಿರಸ್ಕಾರದಿಂದ, ತಾತ್ಸಾರದಿಂದ ನೋಡಿದ್ದರೂ ಮನಸ್ಸು ಅದನ್ನು ಮರೆಯುತ್ತಿತ್ತು. ಸೋಲನ್ನೊಪ್ಪಿಕೊಳ್ಳಲು ಮನಸ್ಸು ಸಿದ್ಧವಾಗಿರಲಿಲ್ಲ. ಇನ್ನು ಮುಂದೆ ಶ್ಯಾಮನ ವಿಚಾರವಾಗಿ ಯಾರಾದರೂ ಮಾತನಾಡಿದರೆ ನಾನು ಅವನ ವಿಚಾರವಾಗಿ ಅಧಿಕಾರವಾಣಿಯಿಂದ ಮಾತನಾಡಬಹುದು. ನಾನು ಅವನ ಸ್ನೇಹಿತ, ನನಗೆ ಅವನು ಚೆನ್ನಾಗಿ ಗೊತ್ತು, ಎಂದು ಹೇಳಿಕೊಳ್ಳಬಹುದೆಂದು ನನಗೊಂದು ರೀತಿಯ ದುರಭಿಮಾನ. ಜತೆಗೆ ನಾನೊಬ್ಬನೇ ಅವನಿಗೆ ಈ ಬಗೆಯ ಸ್ನೇಹಿತನೆಂದು ನನ್ನನ್ನು ನಾನೇ ವಂಚಿಸಿಕೊಂಡಿದ್ದೆ. ಆದರಿಂದ ನನಗೊಂದು ಅಪೂರ್ವ ಹೆಮ್ಮೆ. ಅವನ ಸೆಕ್ಷನ್ನಿನ ಹುಡುಗರೆಲ್ಲರೂ ಹಾಗೆಯೇ ಎಂದು ನನಗೆ ಆಗ ಯೋಚನೆ ಬರಲೇ ಇಲ್ಲ. ನಾನೇ ಅವನಿಗೆ ಪ್ರಾಣ ಸ್ನೇಹಿತನಾಗಿಬಿಟ್ಟೆನೆಂದೂ ನಾನು ಕಲ್ಪಿಸಿಕೊಂಡೆ. ಅದರಿಂದಲೇ, ಆ ಸಂತೋಷದಿಂದಲೇ ಗಂಟೆ ಹೊಡೆದೊಡನೆಯೇ ಎಂದೂ ಇಲ್ಲದುದು ಅಂದು ಮಾತ್ರ ಹೊತ್ತಿಗೆ ಸರಿಯಾಗಿ ತರಗತಿಗೆ ಹೋಗಿ ಕುಳಿತೆ.

ಸಂಜೆ ಮನೆಗೆ ಹೋಗಿ ಬಟ್ಟೆ ಬದಲಾಯಿಸಿ ನನ್ನ ಟೆನ್ನಿಸ್ ಬ್ಯಾಟನ್ನು ಹಿಡಿದು ಹೊರಕ್ಕೆ ಬಂದೆ. ಪಕ್ಕದ ಮನೆಯ ಬಾಗಿಲಲ್ಲೇ ನಿಂತಿದ್ದ ಯಮುನಾ ಕೂಗಿದಳು.

ಯಮುನಾ ನನಗೆ ದೂರದ ಸಂಬಂಧವಾಗಬೇಕು. ಅವಳು ನನಗಿಂತಲೂ ಮೂರು ನಾಲ್ಕು ವರ್ಷ ದೊಡ್ಡವಳು. ಕಾಲೇಜಿನಲ್ಲಿ ಓದುತ್ತಿದ್ದಳು. ಅವಳಿದ್ದುದು ನಮ್ಮ ಪಕ್ಕದ ಮನೆಯಲ್ಲಿ. ಅದು ಅವಳ ಚಿಕ್ಕಪ್ಪನ ಮನೆ. ಅವಳ ತಂದೆಯಿದ್ದುದು ಹಾಸನದಲ್ಲಿ. ಆದರಿಂದ ಇಲ್ಲಿ ಕಾಲೇಜಿನಲ್ಲಿ ಓದಲು ಯಮುನೆಯನ್ನು ಅವಳ ತಂಗಿ ಲಲಿತೆಯನ್ನು ಇಲ್ಲಿ ಬಿಟ್ಟಿದ್ದರು. ಯಮುನಾ ಇದೇತಾನೆ ಜೂನಿಯರ್ ಬಿ. ಎ. ಸೇರಿದ್ದಳು. ಲಲಿತೆ ಜೂನಿಯರ್ ಇಂಟರ್. ಅವರಿಬ್ಬರಿಗೂ ನನಗೂ ಬಹಳ ಸಲಿಗೆ ಬೆಳೆದು ಬಂದಿತ್ತು. ಈ ಸಲಿಗೆ ಹೊಸದಾಗಿರಲಿಲ್ಲ. ಚಿಕ್ಕಂದಿನಿಂದ ನಾವೆಲ್ಲ ಹೆಚ್ಚುಕಡಿಮೆ ಜತೆಯಲ್ಲೇ ಬೆಳೆದುದರಿಂದ ನಮ್ಮಲ್ಲಿ ಬಹಳ ಅನ್ಯೋನ್ಯವಿತ್ತು. ಅದು ಈಗಲೂ ಬೆಳೆದುಬಂದಿತ್ತು.

ನಾನು ಈ ಕತೆಯನ್ನು ಹೀಗೆ ಹೇಳಲು ಆರಂಭಿಸಿದುದು ತಪ್ಪೆಂದು ನನಗೆ ಈಗ ಅನಿಸುತ್ತಿದೆ. ಉತ್ತಮ ಪುರುಷ ಏಕವಚನ "ನಾನು" ಎಂದು ಆರಂಭಿಸಿದುದರಿಂದ ಕೊಂಚ ಪೇಚಾಟ. ನನ್ನ ವಿಷಯವಾಗಿ ಹೇಳಿಕೊಳ್ಳಬೇಕಾಗುತ್ತದೆ. ಒಂದು ಮಾತು ಹೇಳಿದರೆ ಹೆಚ್ಚು, ಒಂದು ಮಾತು ಹೇಳಿದರೆ ಕಡಿಮೆ. ಸತ್ಯವನ್ನು ಹೇಳಬೇಕೆಂದು ತೀರ್ಮಾನವಿದ್ದರೂ ನಮ್ಮ ವಿಷಯ ನಾವು ಹೇಳಿಕೊಳ್ಳುವುದು ಕಷ್ಟ. ನನ್ನ ಗುಣಗಳನ್ನು ಹೇಳಿಕೊಂಡರೆ ಜಂಭದ ಕೋಳಿಯೆನ್ನುತ್ತಾರೆ. ನನ್ನ ಹಲವಾರು ತಪ್ಪುಗಳನ್ನೂ ದೌರ್ಬಲ್ಯಗಳನ್ನೂ ಹೇಳಿಕೊಂಡರೆ ಜನ ಅದಕ್ಕೆ ವಿಪರೀತ ಅರ್ಥ ಕಲ್ಪಿಸುತ್ತಾರೆ. ಇಲ್ಲದ ಮಾತಾಡುತ್ತಾರೆ. ಇದೂ ಅಲ್ಲದೆ ನಮ್ಮನ್ನು ನಾವು ಹಳಿದುಕೊಳ್ಳುವುದೂ ಕಷ್ಟ. ಒಂದೊಂದು ಸಾರಿ ಎಲ್ಲರಿಗೂ ತಮ್ಮನ್ನು ತಾವೇ ಬೈದುಕೊಳ್ಳುವ ಆಸೆ ಬರುತ್ತದೆ. ಆಗ ಸುತ್ತಲಿನ ನಾಲ್ಕು ಸ್ನೇಹಿತರ ಹತ್ತಿರ ತಮ್ಮನ್ನು ತಾವೇ ಹಳಿದುಕೊಳ್ಳುತ್ತಾರೆ. ಆಗ ಉಳಿದವರು ತಮ್ಮನ್ನು ಹೊಗಳಲಿ ಎನ್ನುವ ಒಳಆಸೆ ಇದ್ದೇ ಇರು

ತ್ತದೆ. ಎಲ್ಲಿ ತಾವೆಂದುದನ್ನು ಸ್ನೇಹಿತರು ಒಪ್ಪಿಬಿಡುವರೋ ಎಂದು ಒದ್ದಾಟವಿರುತ್ತದೆ. ಆದರೆ ಬರಹದಲ್ಲಿ ಹಾಗೆ ಹೇಳಿಬಿಟ್ಟರೆ ಅದನ್ನು ಒರೆಸುವಂತೆಯೇ ಇಲ್ಲ. 'ಇಲ್ಲ'ವೆಂದು ಹೇಳಿ ನಮಗೆ ಸಮಾಧಾನ ಹೇಳುವವರೂ ಇಲ್ಲ. ಹೀಗಾಗಿ ಕತೆ ಹೇಳಲು ಆರಂಭಿಸಿ ಈಗ ಪೇಚಿನಲ್ಲಿ ಸಿಕ್ಕಿಕೊಂಡಾಗಿದೆ.

ಈ ಮಾತು ಯಾಕೆ ಹೇಳಿದೆನೆಂದರೆ, ನನಗೆ ಹೆಂಗಸರೆಂದರೆ ಒಂದು ತರಹ. ಅವರು ಇವರು ಎಂದಿಲ್ಲ. ಯಾವ ಹುಡುಗಿಯಾದರೂ ಸರಿ, ನನ್ನ ಮನಸ್ಸು ತಕ್ಷಣವೇ ಕರಗಿ ನೀರಾಗಿ ಹೋಗುವುದು. ಇದನ್ನು ಜನ ಏನೆಂದು ಕರೆಯುವರೋ ನನಗೆ ತಿಳಿಯದು. ಪ್ರೇಮವಿರಲಾರದು. ಏಕೆಂದರೆ ಪ್ರೇಮದಲ್ಲಿ— ನಾನು ತಿಳಿದ ಮಟ್ಟಿಗೆ— ಒಂದು ಹೆಣ್ಣನ್ನು ಕಂಡೊಡನೆಯೇ ಗಂಡಿನ ಹೃದಯದಲ್ಲಿ ತಳಮಳ— ಕವಿಗಳು ಹೇಳುವಂತೆ ಒಂದು ಸವಿನೋವು, ರಸದ ಚಿಲುಮೆ—ಆ ತಳಮಳದಿಂದ ಆ ಹೆಣ್ಣಿನಲ್ಲಿ ಆಸಕ್ತಿ, ಆಸಕ್ತಿಯಿಂದ ಆಸೆ, ಆಸೆಯಿಂದ ಪ್ರೇಮ. ತಮ್ಮನ್ನು ತಾವೇ ಅವರಿಗಾಗಿ ಬಲಿಕೊಡುವ ಮಾತುಗಳು. ಇವು ಇರಬೇಕು. ಇದೂ ಅಲ್ಲದೆ ಪ್ರೇಮಿಯಾದವನು ಯೋಚಿಸಿ ಯೋಚಿಸಿ ಸಣ್ಣಗಾಗಬೇಕು, ತೆಳ್ಳಗಾಗಬೇಕು. ನಿದ್ರೆಯಿಲ್ಲದೆ ಹಗಲೂ ರಾತ್ರಿ ಪ್ರೇಯಸಿಯ ಬಗ್ಗೆ ಚಿಂತಿಸಿ ಚಿಂತಿಸಿ ಕಣ್ಣುಗಳೆರಡೂ ಪಾತಾಳ ಹುಡುಕುತ್ತಿರಬೇಕು. ಇತ್ಯಾದಿಯೆಲ್ಲಾ ಹೇಳುತ್ತಾರೆ. ನಾನೂ ಅಷ್ಟಲ್ಲದಿದ್ದರೂ ನನ್ನ ವೈಥಿಲಿಯನ್ನು ಕಂಡಾಗ ಕೊಂಚ ಹಾಗೆಯೇ ಒದ್ದಾಡಿದ್ದೇನೆ. ಆದರೆ ಮೊದಲು ನನಗೆ ಹಾಗೆಲ್ಲ ಒಂದೂ ಆಗಿರಲಿಲ್ಲ. ನಾನು ಅವರೆಲ್ಲರನ್ನು ಪ್ರೇಮಿಸಿ, ಅವರೆಲ್ಲರ ಬಗೆಗೂ ಯೋಚಿಸುತ್ತಾ ಹೋಗಿದ್ದರೆ, ನಾನು ಒಂದೆರಡು ದಿನದಲ್ಲೇ ಮಾಯವಾಗಬೇಕಾಗಿತ್ತು, ಸಣ್ಣಗಾಗುತ್ತಾ. ಆದರೆ ಇಷ್ಟು ಮಾತ್ರ ನಿಜ. ನನಗೆ ಎಲ್ಲ ಹೆಣ್ಣುಗಳೂ ಒಂದೇ, ಕಂಡೊಡನೆಯೇ ಮನಸ್ಸು ನೀರಾಗಿ ಬಿಡುತ್ತದೆ. ಅವರ ಜತೆಯಲ್ಲಿ ಯಾವಾಗಲೂ ಇರಬೇಕೆನ್ನುವ ಆಸೆ. ಅವರು ನನ್ನೆದುರಿನಲ್ಲಿ ಮತ್ತಾರೊಂದಿಗೂ ಸೇರಕೂಡದು ಎನ್ನುವ ಹುಚ್ಚು ಇಚ್ಛೆ. ಕಾಲೇಜಿನಲ್ಲಿ ಯಾವಳೋ ಒಬ್ಬ ಹುಡುಗಿ ತನ್ನ ತಮ್ಮನ ಜತೆಯಲ್ಲಿ ನಿತ್ಯವೂ ಕಾಲೇಜಿಗೆ ಬರುತ್ತಿದ್ದುದನ್ನು

ಕಂಡು ಆ ತಮ್ಮನ ಮೇಲೆ ಉರಿದುಬಿದ್ದಿದ್ದೇನೆ. ನಾನು ಅವನಾಗಿರ ಬಾರದೆ ಎಂದುಕೊಂಡುದೂ ಉಂಟು. ಗಾಡಿಯಲ್ಲಿ ಬಂದು ಗಾಡಿಯವ ನಿಗೆ ದುಡ್ಡು ಕೊಡುವಾಗ ಅವನೊಂದಿಗೆ ಒಬ್ಬ ಹೆಣ್ಣು ಮಾತನಾಡಿಸುವು ದನ್ನು ಕಂಡು ನಾನಾದರೂ ಗಾಡಿಯವನಾಗಿದ್ದರೆ ಎಂದುಕೊಂಡಿದೇನೆ. ಹೀಗೆ ನನ್ನ ಅಸೂಯೆಗೆ ತಾರತಮ್ಯವೇ ಇರಲಿಲ್ಲ. ಎಲ್ಲರೂ ನನ್ನ ಜತೆ ಯಲ್ಲಿರಬೇಕು. ಯಾವಾಗಲೂ ನನ್ನ ಹತ್ತಿರವೇ ಇರಬೇಕು. ಅವ ರನ್ನು ಬಿಟ್ಟು ನಾನಿರಬಾರದು. ನನ್ನನ್ನು ಬಿಟ್ಟು ಅವರಿರಬಾರದೆನ್ನುವ ಮಹಾಆಸೆ ನನ್ನ ಮನಸ್ಸಿನದು. ಇದರಿಂದ ನಾನು ಸಾಧ್ಯವಾದಷ್ಟು ಹೊತ್ತನ್ನು ಯಮುನಾ, ಇಲ್ಲ ಲಲಿತ ಇವರೊಂದಿಗೇ ಕಳೆಯುತ್ತಿದ್ದೆ.

ನನ್ನ ಕಣ್ಣಿಗೆ ಎಲ್ಲರೂ ಸುಂದರಿಯರೇ. ಎಲ್ಲ ಹುಡುಗಿಯರೂ ಚೆನ್ನಾಗಿಯೇ ಕಾಣುತ್ತಿದ್ದರು. ಇವಳು ಚೆನ್ನ, ಅವಳು ಕುರೂಪಿಯೆನ್ನುವ ಮಾತೇ ಇಲ್ಲ. ನಮ್ಮ ಕಾಲೇಜಿನ ಹುಡುಗರೆಲ್ಲ 'ಇತಿಯೋಪಿಯದ ಮಹಾರಾಣಿ' ಯೆಂದು ಕರೆಯುತ್ತಿದ್ದ ಕಪ್ಪಂಕಪ್ಪುಹುಡುಗಿ ಕೂಡ ನನ್ನ ಕಣ್ಣಿನಲ್ಲಿ ಅಪ್ಸರೆ. ಆಕಾಶಕ್ಕೆ ನನ್ನ ತಲೆ ತಾಗಿಸಿಯೇ ತೀರುವೆನೆಂದು ಹಟ ಹೂಡಿ ಜಿರಾಫೆಯ ಕತ್ತನ್ನು ಪಡೆದ ಹಂಸ ಕೂಡ ಸುರಸುಂದರಿ. ಆದರೆ ಯಮುನಾ, ಲಲಿತ ಇಬ್ಬರು ಮಾತ್ರ ಎಲ್ಲರಿಗಿಂತ ಒಂದು ಮೆಟ್ಟ ಮೇಲು. ಅಂತೂ ಆ ಕಾಲದಲ್ಲೇನೋ ನನಗೆ ಆ ಭಾವನೆಯಿತ್ತು. ಒಂದು ದಿನವಂತೂ ಯಮುನಾ ಬಹಳ ಸುಂದರವಾಗಿ ಅಲಂಕಾರ ಮಾಡಿ ಕೊಂಡಿದ್ದಳು. ಅವಳಿಗೆ ಜಡೆ ಅಷ್ಟೊಂದು ಉದ್ದವಾಗಿರಲಿಲ್ಲ. ಅದನ್ನೇ ಇಬ್ಭಾಗಮಾಡಿ, ಎರಡು ಜಡೆ ಮಾಡಿಕೊಂಡು, ಎರಡೂ ಕಿವಿಗಳ ಮೇಲೆ ಹೆರಳು ಹಾಕಿಕೊಂಡು ಒಂದಕ್ಕೆ ಮಲ್ಲಿಗೆಯ ದಂಡೆ, ಮತ್ತೊಂದಕ್ಕೆ ಗುಲಾಬಿಯ ಹೂವುಗಳನ್ನು ಮುಡಿದಿದ್ದಳು. ಹಣೆಗೆ ಕುಂಕುಮಕ್ಕೆ ಬದಲು ಅರ್ಧಚಂದ್ರಾಕಾರದಲ್ಲಿ ಚಂದ್ರವನ್ನಿಟ್ಟುಕೊಂಡಿದ್ದಳು. ಒಳಗೆ ಒಂದು ನಕ್ಷತ್ರ ಮಿನುಗುತ್ತಿತ್ತು. ಚಮಕಿ ಹಾಕಿದ ಕುಂಕುಮ ಅದೆಂದು ಆಮೇಲೆ ಗೊತ್ತಾಯಿತು. ನಮ್ಮವರಂತೆ ಸೀರೆಯುಡದೆ ಕೊಡಗಿನ ಹುಡುಗಿಯರಂತೆ ಹಿಂದಕ್ಕೆ ನಿರಿಬಿಟ್ಟು ಸೆರಗನ್ನು ಭುಜಕ್ಕೆ ಕಟ್ಟಿದ್ದಳು. ಆ ದಿನ ಮಾತ್ರ ಯಮುನಾ ಕಂಡಷ್ಟು ಸುಂದರವಾಗಿ ಮತ್ತೆಂದೂ ಅವ

ಳಾಗಲೀ ಮತ್ತಾರಾಗಲೀ ಕಾಣಿಸಲಿಲ್ಲ. (ಅಂದರೆ ಈಗ ನನ್ನ ಹೆಂಡತಿಯಾಗಿರುವ ಮೈಥಿಲಿ ಮದುವೆಯಂದು ಇನ್ನೂ ಸುಂದರವಾಗಿ ಕಂಡಳು ಎಂದಿಟ್ಟುಕೊಳ್ಳಿ) ಆವತ್ತಿನಿಂದ ನನಗೆ ಯಮುನೆಯ ವಿಷಯವಾಗಿ ಬಹಳ ಒಳ್ಳೆಯ ಅಭಿಪ್ರಾಯ ಬಂದು ಬಿಟ್ಟಿತು. ಪ್ರಪಂಚದಲ್ಲಿ ಹೆಣ್ಣಿನ ಸೌಂದರ್ಯದ ಮಾದರಿಯೆಂದರೆ ಯಮುನೆಯೆಂದು ನನ್ನ ಭಾವನೆ. ಲಲಿತಳೂ ಹೆಚ್ಚುಕಡಿಮೆ ಅವಳಂತೆಯೇ ಇದ್ದಳು. ಅವಳಿಗೆ ಜಡೆ ಮಾತ್ರ ಬಹಳ ನೀಳವಾಗಿತ್ತು. ತಲೆಗೂದಲೂ ಬಹಳ ಹರವಾಗಿತ್ತು. ಅಂತೂ ಲಲಿತಳ ಬಗ್ಗೆ ಕೂಡ ನನಗೆ ಅದೇ ಭಾವನೆ. ಅದು ಆಗಿನ ನನ್ನ ವಯಸ್ಸಿನಿಂದಿರಬೇಕು. ಎಷ್ಟಿದ್ದರೂ ನನಗೆ ಆಗ ೧೯ ವರ್ಷ. ಲಲಿತಳಿಗೆ ೧೮ ವರ್ಷ. ಯಮುನೆಗೆ ೨೨ ವರ್ಷ.

ನನಗೆ ಹಗಲೂ ರಾತ್ರಿ ಯೋಚನೆಯೆಂದರೆ ಯಮುನೆಯದೇ! ಅವಳಿಗೆ ಮದುವೆಯಾಗಿ ಗಂಡನ ಮನೆಗೆ ಹೊರಟುಹೋಗಿಬಿಟ್ಟರೆ! ಅವಳಿಗೆ ಮದುವೆಯಾಗಿ ಹೊರಟುಹೋದಮೇಲೆ ನಾನು ಹೇಗೆ ತಾನೇ ಇರುವುದು? ನನ್ನ ಮನಸ್ಸನ್ನು ಹೇಗೆ ತಾನೇ ಸಮಾಧಾನಪಡಿಸುವುದು ಎಂದೇ ಯೋಚನೆ. ನನಗೆ ಗೊತ್ತಿದ್ದ ಯಾವುದೇ ಹುಡುಗಿಯ ಮದುವೆಯಾದಾಗಲೂ ನನಗೆ ದುಃಖವಾಗುತ್ತಿತ್ತು. ಅಳು ಬರುತ್ತಿತ್ತು. ಇದು ಬಹಳ ವಿಚಿತ್ರ. ನನ್ನ ಯೌವನದ ಈ ವಿಚಿತ್ರವನ್ನು ನೆನೆದರೆ ನನಗೆ ಈಗ ನಗು ಬರುತ್ತದೆ. ಆದರೆ ಇದು ನಿಜ. ಆಗ ನಾನು ವಿಪರೀತ ಭಾವುಕನಾಗಿದ್ದೆನೆಂದು ತೋರುತ್ತೆ. ಭಾವುಕತೆ (*Sentimentality*) ಯೌವನದ ಆರಂಭದಲ್ಲಿ ಸಹಜ. ನನ್ನ ಹೆಣ್ಣು ಸ್ವಭಾವದಿಂದ ಅದು ನನ್ನಲ್ಲಿ ಅತಿಯಾಗಿತ್ತು ಅಷ್ಟೇ. ಯಾವ ಹುಡುಗಿಗೂ ಅವಳ ಗಂಡನ ಮನೆಯಲ್ಲಿ ಸುಖವಿಲ್ಲವೆಂದು ನನ್ನ ಭಾವನೆ. ಎಲ್ಲರೂ ಯಾಕೆ ಮದುವೆಗಾಗಿ ಹಾತೊರೆಯುವರೋ? ಮದುವೆಯೇ ಇಲ್ಲದೆ ನಿತ್ಯಯೌವನದಲ್ಲಿ ಸುಖವಾಗಿರಬಾರದೇಕೆ ಎಂದು ನನ್ನ ಯೋಚನೆ. ಇದು ನನಗೆ ಆಗ ತೋರುತ್ತಿದ್ದ ರೀತಿ. ಈಗ ನನಗೂ ಮದುವೆಯಾಗಿ, ಮೈಥಿಲಿ, ನನ್ನ ಮಗು ಇವರೊಂದಿಗೆ ಸುಖವಾಗಿ ಸಂಸಾರಮಾಡಿಕೊಂಡಿದೇನೆಂದಮೇಲೆ ಆಗಿನ ಅಭಿಪ್ರಾಯ ಈಗ ನನಗಿಲ್ಲವೆಂದು ಮತ್ತೆ ಹೇಳಬೇಕಾಗಿಯೇ ಇಲ್ಲ.

ಆಗಿನ ನನ್ನಸ್ಥಿತಿ ಮಾತ್ರ ಹೀಗೆ. ಯಾವ ಹೆಂಗಸಿಗೂ ಮದುವೆ ಯಾದಮೇಲೆ ಸುಖವಿಲ್ಲ. ಯಾಕೆ ಮದುವೆಯಾಗುವರೋ ಎಂದು ಚಿಂತೆ. ಎಷ್ಟೋ ಬಾರಿ ಯಮುನೆಯ ಜತೆಯಲ್ಲಿ ನಾನೀ ವಿಷಯ ಮಾತನಾಡಿ ದುದೂ ಉಂಟು. ಚರ್ಚೆ ಹತ್ತಿದಾಗ ಇಬ್ಬರೂ ಜೋರಾಗಿ ಕೂಗಾಡಿ ಬಿಡುತ್ತಿದ್ದೆವು. ರಾತ್ರಿ ಎಷ್ಟೋ ಹೊತ್ತಿನವರೆಗೂ ಬೀದಿಯಲ್ಲಿ— ನಮ್ಮ ಮನೆಗಳ ಮಧ್ಯೆ ಒಂದು ಕಲ್ಲಿದೆ. ಅದರ ಪಕ್ಕದಲ್ಲೇ ಬೀದಿಯ ದೀಪದ ಕಂಬವಿದೆ. ಕಂಬಕ್ಕೊರಗಿಕೊಂಡು ನಾನು, ಕಲ್ಲಿನ ಮೇಲೆ ಕುಳಿತು ಅವಳು— ಈ ವಿಚಾರದಲ್ಲಿ ಬಿಸಿಯಾಗಿ ವಾದಮಾಡಿದ್ದೇವೆ. ಮದುವೆ ಯಾಗಬೇಕು. ಮದುವೆಯಲ್ಲಿರುವಷ್ಟು ಸುಖ ಮತ್ತಾವುದರಲ್ಲೂ ಇಲ್ಲ ವೆಂದು ಅವಳು. ಪ್ರಪಂಚದಲ್ಲಿ ಬಾಳು ಮುಂದೆ ಸಾಗಬೇಕಾದರೆ ಮದುವೆ ಬೇಕೇ ಬೇಕು ಎಂದು ಅವಳು. ಅದು ತಪ್ಪೆಂದು ನಾನು. ಅವಳು ಬಹಳ ಸುಲಭವಾಗಿ ರೇಗಿಬಿಡುತ್ತಿದ್ದಳು. ನನ್ನ ಮಾತು ಮಾತಿಗೂ ರೇಗುತ್ತಿದ್ದಳು. ಆದರೆ ನಾನೂ ಹಟ ಬಿಡುತ್ತಿರಲಿಲ್ಲ. ನೀನು ಬೇಗನೆ ಮದುವೆ ಮಾಡಿಕೋ, ಗೊತ್ತಾಗುತ್ತೆ ಎಂದು ಅವಳಂದು ನನ್ನ ಬಾಯಿ ಮುಚ್ಚಿಸುತ್ತಿದ್ದಳು. ನನಗೇನೋ ಒಳಗೇ ಮದುವೆಯಾಗಲು ಆಸೆ. ಆದರೆ ಬಾಯಲ್ಲಿ ಹೇಳಿಕೊಳ್ಳಲು ಇಷ್ಟವಿಲ್ಲ. ಇನ್ನೆಲ್ಲಿ ಅವಳು ಹಾಸ್ಯಮಾಡಿಬಿಡುವಳೋ ಎನ್ನುವ ಹೆದರಿಕೆ ಬೇರೆ. ಅದರಿಂದಲೇ ಮದುವೆಯ ವಿರುದ್ಧದ ಸೋಗನ್ನು ನಾನು ಬಿಡುತ್ತಲೇ ಇರಲಿಲ್ಲ. ಅವಳು ಯಾವ ವಿಷಯವನ್ನಾದರೂ ಬಹಳ ಧೈರ್ಯವಾಗಿ ಮಾತಾಡಿಬಿಡುತ್ತಿ ದ್ದಳು. ಅದರಿಂದ ಎಷ್ಟೋ ಜನ ಅವಳನ್ನು ಗಂಡುಬೀರಿ, ಅಮೆಜಾನ್ ಎಂದು ಕರೆದುದೂ ಉಂಟು. ಅವಳ ಧೈರ್ಯವೇ ಧೈರ್ಯ. ಯಾವು ದಕ್ಕೂ ಹಿಂಜರಿಯುತ್ತಲೇ ಇರಲಿಲ್ಲ. ಅವಳನ್ನು ಕಂಡರೆ ಒಂದೊಂದು ದಿನ ಹೆದರಿಕೆಯೂ ಆಗುತ್ತಿತ್ತು.

ಮತ್ತೊಂದು ದಿನ ಅವಳು ತನ್ನ ಸ್ನೇಹಿತೆಯೊಬ್ಬಳ ವಿಷಯ ಹೇಳು ತ್ತಿದ್ದಳು. ಶಾರದೆಗೆ ಮದುವೆಯಾದ ಹೊಸದು. ಮದುವೆಗೆ ಮೊದಲು ಕೆಲವು ದಿನ ಬಂದು ಯಮುನೆಯ ಹತ್ತಿರ ತನ್ನ ಗಂಡ ಹಾಗೆ, ಹೀಗೆ, ಅಷ್ಟು ಒಳ್ಳೆಯವನು ಇಷ್ಟು ಒಳ್ಳೆಯವನು ಎಂದೆಲ್ಲ ಹೊಗಳಿಕೊಂಡಿದ್ದಳಂತೆ.

ನನಗೆ ಯಮುನಳೇ ಇದನ್ನು ಹೇಳಿದ್ದಳು. ಆದರೆ ಮದುವೆಯಾಗಿ ಗಂಡನ ಮನೆಗೆ ಹೋದ ಒಂದು ತಿಂಗಳಲ್ಲೇ ಯಮುನಳಿಗೆ ಕಾಗದ ಬರೆದಿದ್ದಳು. ಹೆಂಡತಿಯ ರೂಪ ಅವನಿಗೆ ಸಾಲದಂತೆ. ಅದಕ್ಕೋಸ್ಕರ ಅವಳಿಗೆ ಚಿತ್ರ ಹಿಂಸೆ. ಜತೆಗೆ ಅವಳು ಓದಿದಹುಡುಗಿ. ಅವಳ ಓದುಗಾರಿಕೆಯಮೇಲೆ ಕೂಡ ವ್ಯಂಗ್ಯವಾಗಿ ಟೀಕೆ, ಕುಹಕ. ಇದರಿಂದ ಅವಳಿಗೆ ಜೀವನವೇ ಬೇಸರವಾಗಿ "ಎಲ್ಲಿಯಾದರೂ ಭಾವಿಯನ್ನೋ ಕೆರೆಯನ್ನೋ ಹುಡುಕಿಕೊಳ್ಳಬೇಕು" ಎಂದು ಬರೆದಿದ್ದಳು. ಆ ಪತ್ರ ಓದುತ್ತಿದ್ದಂತೆ ನನಗೆ ತುಂಬಾ ಅಳುಬಂತು. ಮೈಯೆಲ್ಲಾ ಕೋಪದಿಂದ ಉರಿಯುತ್ತಿತ್ತು. ಆ ಸಮಯದಲ್ಲಿ ಶಾರದೆಯ ಗಂಡ ಸಿಕ್ಕಿದ್ದರೆ ಅವನೇನಾಗಿಬಿಡುತ್ತಿದ್ದನೋ! ನನ್ನ ಕೋಪ ಶಾಂತವಾಗಲು ಯಾರನ್ನಾದರೂ ಬೈಯ್ಯಬೇಕಾಗಿತ್ತು. ಅದಕ್ಕಾಗಿ ಯಮುನಳನ್ನೇ ಬೈಯ್ಯಲಾರಂಭಿಸಿಬಿಟ್ಟೆ. ಮದುವೆಯಾಗುವುದು ಮೂರ್ಖತನ, ಮಡ್ಡಿತನ. ಬೇಡ ಅಂದರೆ ಕೇಳಿದರೆ ಸರಿ. ಈ ಹೆಂಗಸರೇ ಹೀಗೆ, ಕೊಂಚವಾದರೂ ಯೋಚನೆಯೇ ಮಾಡುವುದಿಲ್ಲ ಎಂದು ರೇಗಾಡಿದೆ. ಅವಳಿಗೂ ಆವತ್ತು ಗಂಡಸರ ಮೇಲೆ ಕೋಪ ಬಂದಿತ್ತು. ಅವಳೂ ನನ್ನಮೇಲೆ ತಿರುಗಿ ಬಿದ್ದು ದಬಾಯಿಸಿದಳು. ನನಗೂ ಕೋಪ ಮಿತಿಮೀರಿತು. ಅವಳಿಗೂ ಅಂಕೆ ಮೀರಿತ್ತು. ಕೊನೆಗೆ ನನ್ನ ಕೈಹಿಡಿದು ಮುಖ ಪರಚಲು ಬಂದಳು. ಅದು ಅವಳ ಸ್ವಭಾವ. ಅತಿ ರೇಗಿದರೆ ಮೈಮರೆತು ಬೆಕ್ಕಿನಂತೆ ಮೈಕೈಪರಚಿಬಿಡುತ್ತಾಳೆ. ಈಗ ಅವಳ ಯಜಮಾನರೂಕೂಡ ಅವಳನ್ನು ಈ ಮಾತಿಗೆ ಹಂಗಿಸುತ್ತಾರೆ. ನನ್ನನ್ನು ಪರಚಲು ಎತ್ತಿದ ಕೈಯನ್ನು ನಾನು ಹಾಗೆಯೇ ಹಿಡಿದುಕೊಂಡೆ. ಬಿಡಿಸಿಕೊಳ್ಳಲು ಹೋದ ಅವಳು ಆಯ ತಪ್ಪಿ ಮುಗ್ಗರಿಸಿದಳು. ಕೆಳಗೆಲ್ಲಾದರೂ ಬಿದ್ದುಬಿಟ್ಟರೆ ಎನ್ನುವ ಗಾಬರಿ ಅವಳಿಗೂ ಇತ್ತು. ನನಗೂ ಇತ್ತು. ಆಗ ಏನೂ ತೋಚದಹಾಗಾಯಿತು. ಹೀಗಾಗಿ ಅವಳು ಬೀಳದಂತೆ ಗಟ್ಟಿಯಾಗಿ ಹಿಡಿದುಕೊಂಡೆ. ಅವಳು ನನ್ನ ಮೇಲೆಯೇ ಬಿದ್ದು ನನ್ನನ್ನು ತಬ್ಬಿಕೊಂಡು ಬಿಟ್ಟಳು. ಒಂದು ಕ್ಷಣ ಮಾತ್ರ! ಆದರೆ ಆ ಒಂದು ಕ್ಷಣದಲ್ಲಿ ನನ್ನ ಮನಸ್ಸಿನಲ್ಲಿ ದೊಡ್ಡ ಕ್ರಾಂತಿಯಾಗಿಹೋಯಿತು. ಮನಸ್ಸಿಗೆ ಮೊದಲು ಏನೂ ತೋಚದಾಯಿತು. ಇದ್ದಕ್ಕಿದ್ದಂತೆ ಕತ್ತಲಿನಲ್ಲಿ ಹೋಗುತ್ತಿರುವಾಗ ನಿಮ್ಮೆದುರಿಗೇ ಮಿಂಚಿದರೆ

ಆದರ ಅಪಾರ ಬೆಳಕಿನಲ್ಲಿ ನಿಮ್ಮ ಕಣ್ಣಿಗೇನೂ ಕಾಣುವುದಿಲ್ಲ. ಕಣ್ಣು ಕುರುಡಾದಂತಾಗುತ್ತದೆ. ಹಾಗೆಯೇ ಅವಳ ಮೈ ನನ್ನ ಮೈ ತಾಕಿದಾಗ, ನನ್ನ ಮನಸ್ಸು ಕುರುಡಾಯಿತು. ಆ ನಿಮಿಷದ ನನ್ನ ಅನುಭವ ಹೇಳುವುದು ಬಹಳ ಕಷ್ಟ. ಬೇಕೆಂದೇ ಹಾಗೆ ಮಾಡಿದಳೋ, ನಿಜವಾಗಿಯೂ ಆಯ ತಪ್ಪಿ ಬಿದ್ದಳೋ ನನಗೆ ತಿಳಿಯದು. ಆದರೆ ಆ ನಿಮಿಷ ನನಗೆ ಹೊಸ ಅನುಭವ ತಂದಿತು. ಮೊದಲು ಶೂನ್ಯ. ತಕ್ಷಣವೇ ಏನೋ ಒಂದು ಬಗೆಯ ಆಹ್ಲಾದದ ಜಲಪಾತ, ಕಾತರ, ವಿಹ್ವಲತೆ! ಹೀಗೆಯೇ ಇನ್ನಷ್ಟು ಹೊತ್ತಿರಬಾರದೇ ಎನಿಸಿದರೂ ಆ ಕ್ಷಣವೊಂದು ಯುಗವಾಗಿ ತೋರಿತು. ಆದರೂ ಹೆದರಿಕೆ, ಹಿಗ್ಗು! ಎರಡೂ ಹೇಳಲಾರದಷ್ಟು.

ಯಮುನಾ ಆ ಕಡೆ ನಿಂತು ಜಾರಿಹೋಗಿದ್ದ ತನ್ನ ಸೆರಗನ್ನು ಸರಿಪಡಿಸಿಕೊಳ್ಳುತ್ತಿದ್ದಳು. ಅವಳ ಮುಖ ಕೆಂಪೇರಿತ್ತು. ಕೊಂಚ ಬೆವತಿತ್ತು. ಅದರ ಮೇಲೆ ದೀಪದ ಬೆಳಕು ಬಿದ್ದು ಮುಖ ಹೊಳೆಯುತ್ತಿತ್ತು. ತುಟಿ ನಡುಗುತ್ತಿತ್ತು. ನನಗೂ ಎದೆ ಜೋರಾಗಿ ಬಡಿದುಕೊಳ್ಳುತ್ತಿತ್ತು. ಮುಖ ಮೈಯೆಲ್ಲಾ ಬೆವರುತ್ತಿತ್ತು. ಆಗ ಯಮುನಾ ಒಂದೆರಡು ನಿಮಿಷ ನನ್ನೆದುರಿಗೇ ಹಾಗೆಯೇ ನಿಂತಿದ್ದಳು. ಮುಖ ಮೆಲ್ಲನೆ ಸಮಾಧಾನಕ್ಕೆ ಬಂತು. ಗಂಭೀರವಾಯಿತು. ಆಗ ಅವಳ ಮುಖದ ಮೇಲೆ ನಾಚಿಕೆಯ ಕುರುಹಾಗಲಿ, ಅಪಮಾನದ ಚಿಹ್ನೆಯಾಗಲಿ ಇತ್ತೋ ಇಲ್ಲವೋ ನನಗೆ ನೆನಪಿಲ್ಲ. ಒಂದೆರಡು ನಿಮಿಷದ ನಂತರ ಮೊದಲಿನಂತೆಯೇ ನಗುನಗುತ್ತಿದ್ದಳು. ಅವಳ ಆ ಹೂವುನಗೆಯ ಸೊಗಸಿನಲ್ಲಿ ನಾನೂ ಎಲ್ಲ ಕಾತರವನ್ನು ಮರೆತೆ. ಆದರೆ ಹಾಗೆ ಮತ್ತೊಮ್ಮೆ ಆಗಬಾರದೇ ಎಂದು ಮನಸ್ಸು ಒಳಗೇ ಕುದಿಯಿತು. ಅಂದಿನಿಂದ ನಾನೂ ಅವಳೂ ಈ ಮದುವೆಯ ವಿಷಯವಾಗಿ ಚರ್ಚಿಸುವುದು ಬಿಟ್ಟಿದ್ದೆವು. ಆದರೆ ಅಂದಿನ ಆ ಅನುಭವ ನಮ್ಮಿಬ್ಬರನ್ನು ಬಹು ಹತ್ತಿರ ತಂದಿತ್ತು. ನಮ್ಮಿಬ್ಬರ ನಡುವಿನ ಅಂತರದ ಅಗಾಧತೆಯನ್ನು ತೋರಿಸಿಕೊಟ್ಟಿತು!

ಅವಳಿಗೆ ಮದುವೆಯಾಗಿ ಗಂಡನ ಮನೆಗೆ ಹೋಗಿಬಿಟ್ಟರೆ ಎನ್ನುವ ಯೋಚನೆ ನನಗಿನ್ನೂ ಹೆಚ್ಚಾಯಿತು. ಇನ್ನೇನು ಇನ್ನೊಂದು ವರ್ಷ ಕಳೆದರೆ ಅವಳ ಬಿ. ಎ. ಪರೀಕ್ಷೆ ಮುಗಿಯುತ್ತದೆ. ಈಗಾಗಲೇ ಅವಳ

ತಂದ ಗಂಡು ಹುಡುಕುತ್ತಿದ್ದರು. ಅಂದಮೇಲೆ ಪರೀಕ್ಷೆ ಮುಗಿದ ತಕ್ಷಣವೇ ಮದುವೆ. ಆಮೇಲೆ ಅವಳೆಲ್ಲೋ ನಾನೆಲ್ಲೋ ಎನ್ನುವ ಚಿಂತೆ ನನ್ನನ್ನು ಹಿಂಸೆಮಾಡಲಾರಂಭಿಸಿತು. ಮದುವೆಯಿಲ್ಲದಿರುವುದೂ ಅಸಾಧ್ಯ. ಮದುವೆಯಾಗಬೇಕು. ಅದು ನಿಸರ್ಗದ ನಿಯಮವೆಂದು ನಾನಾಗಲೇ ಒಪ್ಪಿದೆ. ನಾನೇ ಯಾಕೆ ಅವಳನ್ನು ಮದುವೆಯಾಗಬಾರದೆಂದೂ ನನಗೆ ಒಂದೊಂದು ಬಾರಿ ಅನ್ನಿಸುತ್ತಿತ್ತು. ಅದು ಹೇಗೆ ತಾನೇ ಸಾಧ್ಯ? ಮೊದಲು ಅವಳು ಒಪ್ಪಬೇಕು. ಅವಳಿಗೇನೋ ನನ್ನನ್ನು ಬಿಟ್ಟುಹೋಗಲು ಇಷ್ಟವಿಲ್ಲವೆಂದು ನನಗೆ ಗೊತ್ತು. ಅಷ್ಟಲ್ಲದೆ ದಿನವೂ ಮನೆಯಲ್ಲಿ ಬೈಸಿಕೊಂಡರೂ ನನ್ನ ಜತೆಗೆ ಗಂಟೆಗಟ್ಟಲೆ ಹರಟೆ ಹೊಡೆಯಲು ಬರುತ್ತಿದ್ದಳೇ? ಲಲಿತ ಕೂಡ ನಮ್ಮನ್ನು ಆಡಿಕೊಳ್ಳುತ್ತಿದ್ದಳು. ಯಾವಾಗಲೂ ಹರಟೆ ಕೊಚ್ಚಲು ನಿಮಗೇನಿದೆಯೋ ವಿಷಯ? ಎಂದು ಕೇಳಿ ತಾನೇ ಅದಕ್ಕೆ ಉತ್ತರ ಹೇಳಿಬಿಡುತ್ತಿದ್ದಳು. ಅವಳಿಗೆ ಯಾರು ಹೇಳಿಕೊಟ್ಟಿದ್ದರೋ ಏನೋ, ಯಾವ ಪುಸ್ತಕದಲ್ಲಿ ಓದಿದ್ದಳೋ. ನಮ್ಮ ಮೇಲೆ ಅದನ್ನು ಉಪಯೋಗಿಸಿಬಿಡುತ್ತಿದ್ದಳು. ಪ್ರೇಮಿಗಳಿಗೆ ಮಾತಾಡಲು ಯಾವ ವಿಷಯವೂ ಬೇಕೇ ಇಲ್ಲವಂತೆ. ನಿಮಗೂ ಹಾಗೆಯೇ ಅಲ್ಲವೇನೋ ಎಂದು ನಗುತ್ತಾ ಓಡಿಬಿಡುತ್ತಿದ್ದಳು. ಹುಚ್ಚು ಹುಡುಗಿ! ಅವಳ ಮೇಲೆ ಆಗ ನನಗೆ ಕೋಪಕ್ಕೆ ಬದಲು ಮಮತೆ ಹೆಚ್ಚುತ್ತಿತ್ತು. ಯಮುನೆಗೆ ನನ್ನನ್ನು ಕಂಡರೆ ಮನಸ್ಸು .ಕೊಂಚ ಹರಿಬಿಡುತ್ತದೆ. ಎಂದು ನನಗೆ ಅನಿಸಿತ್ತು. ನನ್ನನ್ನು ಮದುವೆಯಾಗಲು ಅವಳು ಒಪ್ಪಿದರೂ ಒಪ್ಪಬಹುದು. ಆದರೆ ವಯಸ್ಸು! ನನಗಿಂತಲೂ ಅವಳು ದೊಡ್ಡವಳು. ಆದರೇನೀಗ? ಆ ಕ್ಷಣದಲ್ಲಿ ಸ್ವರ್ಗವೇ ಕೈಗೆ ಎಟುಕಿದಂತಿತ್ತು. ಮನಸ್ಸಿನ ಮುಂದಿಗೆ ಮುರಿಯುತ್ತಾ ಕುಳಿತುಕೊಳ್ಳುವ ಕಾಲ. ಯಾವ ಅಡ್ಡ ಬಂದರೂ ಅದನ್ನು ಅಲ್ಲಗಳೆಯುವ ವಯಸ್ಸು. ಅವಳ ಅಪ್ಪ ಅಮ್ಮ ಒಪ್ಪುವರೇ ಎನ್ನುವ ಪ್ರಶ್ನೆಯನ್ನು ಅಸಡ್ಡೆಯಿಂದ ಬದಿಗೆ ತಳ್ಳಿಬಿಟ್ಟೆ. ಆದರೆ ನಮ್ಮ ತಾಯಿ ತಂದೆಯ ವಿಷಯ ಮಾತ್ರ ಹಾಗೆ ಮಾಡಲಾಗಲಿಲ್ಲ. ನಮ್ಮ ಮನೆಯವರಿಗಂತೂ ಯಮುನೆಯ ತಲೆ ಕಂಡರೇ ಆಗದು. ನನ್ನ ತಾಯಿಯಂತೂ ಮಾತುಮಾತಿಗೂ ಅವಳನ್ನು ಬೈಯುತ್ತಿದ್ದರು. ಯಮುನೆಯ ವಿಷಯ

ಕ್ಕಷ್ಟೇ ಅಲ್ಲ. ಲಲಿತಳ ವಿಷಯಕ್ಕೂ ಹಾಗೆಯೇ. ಮಾತೆತ್ತಿದರೆ ಸಾಕು ಸಿಡಿಸಿಡಿಯಾಗುತ್ತಿದ್ದರು. ನಾನು ಯಮುನೆಯೊಂದಿಗೆ ಮಾತನಾಡುತ್ತಾ ನಿಂತುದನ್ನು ಕಂಡರಂತೂ ಅವರಿಗೆ ಹೊಟ್ಟೆಗೆ ಹಾಲಾಹಲ ಹುಯ್ದು ಕೊಂಡಂತೆ! ನಮ್ಮ ತಂದೆ ಈ ಕಡೆ ಸಂಪ್ರದಾಯಸ್ಥರು ಆ ಕಡೆ ಕಟ್ಟು ನಿಟ್ಟಿನ ಮನುಷ್ಯ. ಬಹಳ ಶಿಸ್ತಿನ ಮನುಷ್ಯ. ಆಗ ಅವರು ನನ್ನನ್ನು ಶಿಸ್ತಿನಿಂದ ಹದ್ದಿನಲ್ಲಿಡದಿದ್ದರೆ ನನ್ನ ಜೀವನ ಏನೇನೋ ಆಗಿಬಿಡುತ್ತಿ ತ್ತೇನೋ! ಈಗ ಅದರ ಫಲವಾಗಿ ಕೊಂಚವಾದರೂ ಬಿಗಿ ಬಂದಿದೆ. ನನ್ನ ತಂದೆ ನನ್ನನ್ನು ಕಂಡಹಾಗೆಲ್ಲಾ ಬೈಯುತ್ತಿದ್ದರು. ಯಮುನೆಯ ಜತೆಯಲ್ಲಿ ನಾನು ಮಾತನಾಡಕೂಡದೆಂದು ಕಟ್ಟುನಿಟ್ಟು ಮಾಡಿದರು. ಅದು ನನ್ನ ಒಳ್ಳೆಯದಕ್ಕೇ ಅವರು ಮಾಡಿದರೂ ನನಗೆ ಮಾತ್ರ ಅವರ ಮೇಲೆ ಅಪಾರ ಸಿಟ್ಟುಬಂತು. ಅವರ ಮಾತೆಲ್ಲ ನನಗೆ ಕಹಿಯಾಗಿ ತೋರಿತು. ನನ್ನನ್ನು ಕಂಡರೇ ಅವರಿಗಾಗದು ಎಂದು ನಾನು ತೀರ್ಮಾ ನಿಸಿಬಿಟ್ಟೆ! ಒಂದೊಂದು ಸಾರಿ ಹಟಕ್ಕಾಗಿ ಅವರ ಮಾತನ್ನು ಕೇಳಿಯೇ ಬಿಡಬೇಕು, ಯಮುನೆಯೊಂದಿಗೆ ಮಾತನಾಡುವುದನ್ನು ಬಿಟ್ಟುಬಿಡ ಬೇಕೆಂದು ಸಂಕಲ್ಪಮಾಡಿಕೊಂಡು ಸಂಜೆಯವರೆಗೂ ಕಲ್ಲುಮನಸ್ಸುಮಾಡಿ ಕೊಂಡಿರುತ್ತಿದ್ದೆ. ಆದರೆ ಆಗಲೇ ಹೇಳಿದೆನಲ್ಲ. ಹೆಂಗಸರೆಂದರೆ ಬೆಂಕಿ ಯಲ್ಲಿಟ್ಟ ಕರ್ಪೂರ ನನ್ನ ಮನಸ್ಸು! ಯಮುನೆಯ ಮುಖ ನೆನೆದುಕೊಂಡರೆ ಸಾಕು. ಶಿಸ್ತು, ಬಿಗಿ, ಕಟ್ಟುನಿಟ್ಟು, ಸಂಕಲ್ಪಗಳೆಲ್ಲ ತೂರಿಹೋಗುತ್ತಿ ದ್ದುವು. ನಮ್ಮ ತಂದೆ ತಿಂಡಿಗೆಂದು ನನಗೆ ದುಡ್ಡು ಕೊಡುತ್ತಿದ್ದರು. ಆ ದುಡ್ಡಿನಲ್ಲಿ ಮೊದಮೊದಲು ತಿಂಡಿ ತಿಂದುಬಿಡುತ್ತಿದ್ದೆ. ಆದರೆ ಆ ಮೇಲೆ ಯಮುನೆಗೆ ಏನಾದರೂ ರಿಬ್ಬನ್ನೋ, ಬ್ರೋಚೋ, ತಂದುಕೊಡು ತ್ತಿದ್ದೆ. ಅವಳಿಗೆ ಗುಟ್ಟಾಗಿ ಪ್ರೇಮದ ಕಾದಂಬರಿಗಳನ್ನು ತಂದುಕೊಡು ತ್ತಿದ್ದೆ. ಅವಳೊಬ್ಬಳಿಗೇ ·ತಂದುಕೊಟ್ಟರೆ ಲಲಿತ ಸುಮ್ಮನಿರುವಳೇ. ಅವಳಿಗೂ ಬ್ರೋಚಿನ ಲಂಚ ತಿನ್ನಿಸಬೇಕಾಗಿತ್ತು. ನಮ್ಮ ತಂದೆಗೆ ಅದು ತಿಳಿದು ನನಗೆ ಕೊಡುತ್ತಿದ್ದ ದುಡ್ಡನ್ನು ನಿಲ್ಲಿಸಿಬಿಟ್ಟರು. ಮನೆಯಲ್ಲೇ ತಿಂದುಕೋ ಎಂದುಬಿಟ್ಟರು. ಆಗ ನನ್ನ ಕಣ್ಣಿನಲ್ಲಿ ಅವರು ರಾವಣನೋ ಕುಂಭಕರ್ಣನೋ ಆಗಿರಬೇಕು. ಅವರ ಮೇಲೆ ನನಗೆ ಅಷ್ಟು ಕೋಪ,

ದ್ವೇಷ! ೧೬-೧೯ ವರ್ಷದ ಹುಡುಗನನ್ನು ಯಾವುದಾದರೂ ಕೆಡುಕಿನಿಂದ ತಪ್ಪಿಸಬೇಕಾದರೆ ಹೀಗೆ ದಂಡನೆಮಾಡಿ ಏನೂ ಉಪಯೋಗವಿಲ್ಲವೆಂದು ಕಾಣುತ್ತದೆ. ತಾನು ಸಂಕಟಪಡುತ್ತಿರುವ ಹುತಾತ್ಮ. ಪ್ರಪಂಚವೇ ತನ್ನ ವಿರುದ್ಧ ನಿಂತಿದೆಯೆನ್ನುವ ಭಾವನೆ ಅವನಿಗೆ ಬಂದು ಆ ಕೆಡುಕಿಗೇ ಭದ್ರವಾಗಿ ಅಂಟಿಕೊಳ್ಳುತ್ತಾನೆ. ನನಗಂತೂ ಆಗ ಹಾಗೆಯೇ ಆಯಿತು. ನಾನು ಸಂತೋಷವಾಗಿ ಕಾಲ ಕಳೆಯುವುದು ಅವರಿಗೆ ಬೇಕಿಲ್ಲವೆಂದು ತೀರ್ಮಾನಿಸಿಬಿಟ್ಟೆ. ಅದರಿಂದಲೇ ಯಮುನೆಗೆ ಇನ್ನೂ ಬಲವಾಗಿ ಗಂಟುಬಿದ್ದೆ. ಈಗ ಅವಳಾಡಿದುವೇ ವೇದವಾಕ್ಯವಾಗಿಬಿಟ್ಟಿತು. ಅವಳಿಗಾಗಿ ನಾನು ಏನು ಮಾಡಲೂ ಸಿದ್ಧನಾಗಿದ್ದೆ. ಆದರೆ ನನಗೂ ಅವಳಿಗೂ ಮದುವೆಯಾಗುವುದು ಮಾತ್ರ ಅಸಂಭವ ಎನಿಸಿತ್ತು. ಅವಳಿಗೆ ಇನ್ನೊಂದು ವರ್ಷಕ್ಕೆ ಮದುವೆಯಾಗಿ ಅವಳೇನೋ ಗಂಡನ ಮನೆಗೆ ಹೋಗುವಳು. ಆಮೇಲೆ? ಆಮೇಲೇನು? ನಾನು ಖಂಡಿತವಾಗಿಯೂ ಸತ್ತೇ ಹೋಗುತ್ತೇನೆ ಎಂದುಕೊಂಡಿದ್ದೆ. ಅವಳ ಮನಸ್ಸು ಹೇಗಿದೆ, ಅವಳು ಮುಂದೆ ಸುಖವಾಗಿರುವಳೇ ಇಲ್ಲವೇ ಎನ್ನುವ ಯೋಚನೆ ನನಗೆ ಬರಲೇ ಇಲ್ಲ. ಯಮುನೆಯ ಅನಂತರ ಇದೇ ಬಗೆಯ ಚಿಂತೆ ಲಲಿತೆಯ ವಿಷಯಕ್ಕೂ ಬರುವ ಕಾಲವೂ ಇತ್ತು. ಆಗ ಇನ್ನೂ ಒಂದು ಯೋಚನೆ ಬಂತು. ಬಹಳ ಅಮೋಘವಾದುದೆಂದು ನಾನು ಆಗ ತಿಳಿದಿದ್ದೆ. ಯೌವನದ ಕಾವಿನಲ್ಲಿ ಬಂದ ಸಹಜವಾದ ಯೋಚನೆ ಅದು. ನಾನು, ಯಮುನಾ ಇಬ್ಬರೇ ಎಲ್ಲಾದರೂ ಬೊಂಬಾಯಿಗೋ ಕಲ್ಕತ್ತೆಗೋ ಓಡಿಹೋಗಿಬಿಟ್ಟರೆ! ನಿಜ! ಅಲ್ಲಿಗೆ ಹೋದಮೇಲೆ? ಆ ಪ್ರಶ್ನೆ ತಲೆಗೆ ಏರಲೇ ಇಲ್ಲ! ಅಂತೂ ಮನಸ್ಸು ಆಗ ಒಂದೇ ಸಮನಾಗಿ ಕುದಿಯುತ್ತಿತ್ತು. ಯಮುನೆಗೆ ಆ ಮಾತು ಹೇಳಬೇಕೆಂದುಕೊಳ್ಳುತ್ತಿದ್ದೆ. ಆದರೆ ಹೇಳುವುದು ಮಾತ್ರ ಕಷ್ಟ. ಬಾಯಿಯವರೆಗೂ ಬಂದುಬಿಡುತ್ತಿತ್ತು. ಆದರೆ ನಾಲಿಗೆಯಿಂದ ಕೆಳಗೆ ಮಾತ್ರ ಇಳಿಯುತ್ತಿರಲಿಲ್ಲ. ಹೀಗಾಗಿ ನನ್ನ ಮನಸ್ಸಿನ ಮಾತು ಮನಸ್ಸಿನಲ್ಲಿಯೇ ಹೂಳಿಹೋಯಿತು. ಅವಳಿಗೆ ನನ್ನ ಈ ಪೇಚಾಟ ಗೊತ್ತಾಗಿರಬೇಕು. ಆದರಲ್ಲಿಯೂ ಹೆಂಗಸರಿಗೆ ಈ ವಿಷಯದಲ್ಲಿ ಬುದ್ಧಿ ಬಹಳ ಚುರುಕು. ಬಹಳ ಸೂಕ್ಷ್ಮವಾದುದನ್ನೂ ಬಹಳ

ಬೇಗನೆ ತಿಳಿದುಬಿಡುತ್ತಾರೆ. ನನ್ನ ಮಾತಿನ ಧೋರಣೆ, ನನ್ನ ಮುಖದ ಮೇಲೆ ಆಗಾಗ ಕಾಣುತ್ತಿದ್ದ ಮಾಸಲು ಇವುಗಳಿಂದಲೇ ಅವಳು ಊಹಿಸಿರಬೇಕು. ಅದೂ ಅಲ್ಲದೆ ಒಂದು ದಿನ ಅವಳು ಯಾವುದೋ ಪುಸ್ತಕಕ್ಕಾಗಿ ನನ್ನ ಕೋಣೆಗೆ ಬಂದುಬಿಟ್ಟಳು. ನಮ್ಮ ಮನೆಯವರ ಕಣ್ಣು ತಪ್ಪಿಸಿ ಬರುವುದೆಂದರೆ ಸಾಹಸದ ಕೆಲಸವೇ. ಆಗ ಅವಳಿಗೆ ನನ್ನ ಮನಸ್ಸಿನ ಹವಣು ಗೊತ್ತಾಗಿರಬೇಕು. ನನಗೊಂದು ದುರಭ್ಯಾಸ. ಯಾವುದಾದರೂ ಬಹಳ ಸುಂದರವಾದ ಕವಿತೆಯಾಗಲಿ, ಮನಸ್ಸಿಗೆ ತಾಗುವಂತಹ ಮಾತಾಗಲಿ ಸಿಕ್ಕಿದರೆ ಅದನ್ನು ನನ್ನ ಕೋಣೆಯ ಗೋಡೆಯ ಮೇಲೆ ಮತ್ತು ಪುಸ್ತಕಗಳಲ್ಲಿ ಬರೆಯುವುದು ನನ್ನ ಅಭ್ಯಾಸ. ಈಗ ಕೂಡ ನನಗೆ ಆ ಅಭ್ಯಾಸ ಹೋಗಿಲ್ಲ. ಈಗ ನನ್ನ ಹೆಂಡತಿ ನನ್ನನ್ನು ನಿತ್ಯವೂ ಹಾಸ್ಯಮಾಡುತ್ತಾಳೆ ಆ ವಿಷಯವಾಗಿ. ವಾರಕ್ಕೊಮ್ಮೆ ನನ್ನ ಕೋಣೆಯ ಗೋಡೆಯನ್ನು ಸುಣ್ಣ ಹೊಡೆಸಬೇಕೆಂದು! ಆಗ ಯಮುನೆ ಕೋಣೆಯೊಳಕ್ಕೆ ಬಂದಾಗ ಗೋಡೆಯ ಮೇಲೆ ಅದೇತಾನೆ ಒಂದು ಕವಿತೆಯ ಚೂರನ್ನು ಬರೆಯುತ್ತಿದ್ದೆ. ನನಗೆ ಆ ಕವಿತೆಯ ಸಾಲುಗಳು ಚೆನ್ನಾಗಿ ನೆನಪಿಲ್ಲ. ಶೇಕ್ಸ್‌ಪಿಯರನದೊ, ಶೆಲ್ಲಿಯದೋ ಅದೂ ನೆನಪಿಲ್ಲ. ಅದರ ಅರ್ಥ ಮಾತ್ರ ನೆನಪಿದೆ. ಮನಸ್ಸಿನ ಕುದಿಯನ್ನು ಹೇಳಲಾರದವನ ಪಾಡಿಗಿಂತ ದುಃಖತರವಾದುದು ಯಾವುದೂ ಇಲ್ಲ. ಕೋಗಿಲೆಯ ಕತ್ತನ್ನು ಹಿಸುಕಿದಂತೆ ಅವನ ಹೃದಯವನ್ನು ಆ ಮಾತು ಪ್ರತಿ ನಿಮಿಷವೂ ಹಿಸುಕುತ್ತಿರುತ್ತದೆ. ಹೀಗೆಯೇ ಇನ್ನೂ ಒಂದೆರಡು ಮಾತು. ಅದರಲ್ಲಿ 'ಪ್ರೇಮ' ಎಂಬ ಪದ ಬಂದಿತ್ತು. ಅದನ್ನು ನೋಡಿ ಯಮುನಾ ನಕ್ಕಳು. ನಾನೂ ನಕ್ಕೆ ಅವಳ ಮುಖನೋಡಿ. ಆದರೆ ಅವೆರಡರ ವ್ಯತ್ಯಾಸ! ನನ್ನ ನಗು ಅಳುವಿನ ನಗು! ಅವಳಿಗೆ ತಕ್ಷಣವೇ ಅರ್ಥವಾಗಿರಬೇಕು. ಮಾತಿಲ್ಲದೆ ಬೇಕಾದ ಪುಸ್ತಕ ತೆಗೆದುಕೊಂಡು ಹೋಗಿಬಿಟ್ಟಳು. ಹೋಗುವಾಗ ಒಮ್ಮೆ ಮಾತ್ರ ನನ್ನ ಕಡೆ ದಿಟ್ಟಿಸಿ ಹೋದಳು. ಆ ಸಮಯದಲ್ಲಿ ಅವಳ ಕಣ್ಣಿನಿಂದ ಒಂದೇ ನೋಟ! ಆ ನೋಟವನ್ನು ನಾನೆಂದೂ ಮರೆಯುವಂತಿಲ್ಲ. ಸಹಾನುಭೂತಿ, ನೋವು, ನಿಸ್ಸಹಾಯತೆಗಳ ಪ್ರತೀಕ ಆ ನೋಟ. ಸುರಿಸದ ಕಣ್ಣೀರಿನ ಭಾರದಿಂದ ಆ ನೋಟವೂ ಭಾರವಾದಂತಿತ್ತು. ಮುಖವೂ

ಘುಮುಗುಟ್ಟುತ್ತಿತ್ತು. ನನಗೆ ಎದೆಯಮೇಲೆ ಒಂದು ಪ್ರಪಂಚದ ಭಾರ ವನ್ನೇ ಹೇರಿದಂತಾಯಿತು. ಯಮುನೆ ಕೂಡ ನನ್ನ ಕೈಬಿಡುವಳಃ. ಅವಳೂ ನಿಸ್ಸಹಾಯೆ ನನ್ನಂತೆಯೇ ಎಂದು ಹೃದಯ ಕಿವಿಚಿದಂತಾ ಯಿತು. ಆದರೆ ನನ್ನೊಂದಿಗೆ ಧೈರ್ಯವಾಗಿ ನಿಲ್ಲಬಹುದಾಗಿತ್ತಲ್ಲ ಎಂದೂ ಮನಸ್ಸು ನೊಂದುಕೊಂಡಿತು. ಆಗಲೇ ಇನ್ನೊಂದು ಕವಿತೆಯ ಸಾಲು ನೆನಪಾಯಿತು. ಇವನ್ನು ನಾನು ಅದುವರೆಗೂ ಅರ್ಥಮಾಡಿಕೊಂಡಿರ ಲಿಲ್ಲ 'ಹೆಂಗಸಿನ ಮನಸ್ಸು ಗಾಳಿಗಿಂತಲೂ ಚಂಚಲ. ಅದನ್ನು ನಂಬು ವುದೆಂತು!' ಯಮುನೆಯ ಅಂದಿನ ನಡವಳಿಕೆಯನ್ನು, ಈಗ, ಹಲ ವಾರು ವರ್ಷಗಳು ಕಳೆದಮೇಲೆ, ಅನುಭವದಿಂದ ಕಳಿತ ಮನಸ್ಸಿನಿಂದ ವಿಚಾರಮಾಡಿದರೆ ಆಗ ಯಮುನಾ ಮಾಡಿದುದೇ ಸರಿಯೆಂದು ನನಗೆನ್ನಿ ಸುತ್ತಿದೆ. ಆಗ ನಾವೇನಾದರೂ ಕೊಂಚ ಹರಿಬಿದಿದ್ದರೆ ಅಚಾತುರ್ಯ ವಾಗಿ ಹೋಗುತ್ತಿತ್ತು. ಆ ವಿಷಯಗಳಲ್ಲಿ ಹೆಂಗಸಿಗೆ-ಸ್ವಭಾವವಾಗಿಯೇ ಬುದ್ಧಿವಂತಿಕೆ. ಮುಂದಿನ ಸುಖಕ್ಕೆ, ಬಾಳಿನ ಹದಕ್ಕೆ ಏನುಬೇಕು, ಏನು ಬೇಡವೆಂಬುದು ಹೆಂಗಸಿಗೆ ಸ್ವಭಾವವಾಗಿಯೇ ತಿಳಿದುಹೋಗುತ್ತದೆ. ಇದರಿಂದ ಹೆಂಗಸು ಹೆಚ್ಚಾಗಿ ತಪ್ಪು ಹಾದಿ ತುಳಿಯುವುದಿಲ್ಲ. ನನಗೆ ಆಗ ಹಾಗನ್ನಿಸಲಿಲ್ಲ. ಆಗ ನನಗೆ ಅನುಭವವೂ ಇರಲಿಲ್ಲ. ಯೌವನದ. ಬಿಸಿ, ಜತೆಗೆ ಅವಳಮೇಲಿನ ಅಗಾಧ ಬಯಕೆ. ಮನಸ್ಸು ಅವಳ ನಡ ವಳಿಕೆಯಿಂದ ಕಹಿಯಾಯಿತು. ಆದರೆ ಈ ಕಹಿ ಬಹಳಕಾಲ ಉಳಿಯ ಲಿಲ್ಲ. ಹೆಂಗಸಿನ ವಿಚಾರವಾಗಿ ನನ್ನ ಮನಸ್ಸಿನಲ್ಲಿ ಕಹಿ ಉಳಿಯುವಂ ತೆಯೇ ಇರಲಿಲ್ಲ. ಅದು ಮೆಲ್ಲಮೆಲ್ಲನೆ ಕಡಿಮೆಯಾಗುತ್ತಿತ್ತು. ಇಷ್ಟಾ ದರೂ ನಾನು ಯಮುನೆಯೊಂದಿಗೆ ಹರಟೆ ಕೊಚ್ಚುವುದನ್ನು ಕಡಿಮೆ ಮಾಡಿರಲಿಲ್ಲ. ಒಂದೆರಡು ಗಂಟೆ ಪಟ್ಟಾಂಗ ಹಾಸುವುದರಲ್ಲೇ ಕಳೆಯು ತ್ತಿದ್ದೆ. ನಗುತ್ತಿದ್ದೆ, ನಗಿಸುತ್ತಿದ್ದೆ. ಆದರೆ ನಾವು ಬಾಯಲ್ಲಿ ಹೇಳದಿದ್ದರೂ ನಮ್ಮಿಬ್ಬರ ಮಧ್ಯೆ ಒಂದು ಅಂತರವಿದ್ದೇ ಇತ್ತು. ಒಬ್ಬರಿಗೊಬ್ಬರು ಎರಡು ಮೂರು ಅಡಿಯಷ್ಟಾದರೂ ದೂರವಿರುತ್ತಿದ್ದೆವು. ಇದು ತಾನೇತಾನಾಗಿ ನಾವು ಅನುಸರಿಸಿದ ನಿಯಮ!

ಯಮುನಾ ನನ್ನನ್ನು ಕೂಗಿದುದು ನಾಟಕದ ವಿಷಯ ಮಾತಾಡು ವುದಕ್ಕೇ! ನಾಟಕಕ್ಕೆ ಅವಳೂ ಬಂದಿದ್ದುದನ್ನು ನಾನು ನೋಡಿದ್ದೆ. ನಾಟಕವಾದಮೇಲೆ ಅವಳ ಜತೆಗೇ ಮನೆಗೆ ಹಿಂತಿರುಗಬೇಕೆಂದಿದ್ದೆ. ಆದರೆ ಶ್ಯಾಮುನ ಹತ್ತಿರ ಸಿಕ್ಕಿಹಾಕಿಕೊಂಡು ಬರಲಾಗಲಿಲ್ಲ. ಬೆಳಿಗ್ಗೆ ಕೂಡ ಅವಳನ್ನು ನೋಡಲಾಗಲಿಲ್ಲ. ಅವಳು ಮೊದಲು ಆಡಿದ ಮಾತೇ ನಾಟಕದ ವಿಷಯ.

'ಏನೋ, ಸೀನು, ನಿನ್ನೆ ನಾಟಕ ನೋಡಿದೆಯೇನೋ?' ಎಂದಳು ನಗುತ್ತಾ.

'ನೋಡಿದೆಕಣೇ. ಅಷ್ಟೇ ಅಲ್ಲ. ನಿನ್ನೆ ಆ ಹೆಂಗಸಿನ ಪಾತ್ರ ಹಾಕಿದ್ದನಲ್ಲಾ ಅವನು ನನ್ನ ಸ್ನೇಹಿತ. ಹೇಗಿತ್ತು ಅವನ ಪಾತ್ರ?' ಎಂದೆ, ಜಂಭದಿಂದ. ನಾನೇ ಆ ಪಾತ್ರ ವಹಿಸಿದ್ದರೂ ನನಗೆ ಅಷ್ಟು ಜಂಭವಾಗು ತ್ತಿತ್ತೋ ಇಲ್ಲವೋ! ಆದರೆ ನನಗೆ ಶ್ಯಾಮುವಿನ ಕೈಯ್ಯಲ್ಲಾದ ಅಪಮಾನ ವನ್ನು ಮಾತ್ರ ಹೇಳಿಕೊಳ್ಳಲಿಲ್ಲ.

'ಯಾರೋ — ಯಾರು?-'

'ಅದೇ ಕಣೇ. ಆ ಶ್ಯಾಮುಸುಂದರ್. ಅವನೂ ಸೀನಿಯರ್ ಇಂಟರ್ ಮಿಾಡಿಯಟ್ ಕಣೇ. ಈ ವರ್ಷ ನನ್ನ ಜತೆಯಲ್ಲೇ ಹಣ ಕಟ್ಟುತ್ತಾನೆ. ಅವನೂ ನನ್ನ ಜತೆಯುವನೇ. ನನಗೂ ಅವನಿಗೂ ಬಹಳ ಸ್ನೇಹ. ಇವತ್ತು ಮಧ್ಯಾಹ್ನ ಇಬ್ಬರೂ ಕಾಫಿ ಕುಡಿಯುತ್ತಾ ತುಂಬಾ ಹೊತ್ತು ಹರಟೆ ಹೊಡೆ ಯುತ್ತಿದ್ದೆವು.'

'ಮತ್ತೆ ಇವತ್ತಿನವರೆಗೂ ನೀನು ಅವನ ವಿಚಾರ ನನಗೆ ಹೇಳಿಯೇ ಇರಲಿಲ್ಲ. ಒಂದುಸಾರಿಯೂ ಅವನ ಮಾತೇ ಎತ್ತಲಿಲ್ಲ.'

ಆದರೆ ಈ ಮಾತಿನಿಂದ ನಾನು ಪೇಚಾಟಕ್ಕೆ ಸಿಕ್ಕಿಕೊಂಡೆ. ನಾನೇನೋ ಜಂಭದಲ್ಲಿ ಅವನು ನನ್ನ ಸ್ನೇಹಿತನೆಂದು ಹೇಳಿಕೊಂಡುಬಿಟ್ಟೆ. ಆದರೆ ಈಗ ಮಾತಿನಲ್ಲಿ ಸಿಕ್ಕುಹಾಕಿಕೊಂಡೆ.

'ಸುಮ್ಮನೆ ಹೇಳಿರಲಿಲ್ಲ, ಅಷ್ಟೇ. ಇದೂ ಅಲ್ಲದೆ ಅದೇನು ದೊಡ್ಡ ವಿಷಯ? ಅವನೇನೋ ಚೆನ್ನಾಗಿ ಪಾತ್ರವಹಿಸುತ್ತಾನೆ. ಆದರೆ ಅವನಿಗೆ ವಿಪರೀತ ಹೆಡಸು. ನನ್ನನ್ನು ಬಿಟ್ಟರಿನ್ನಿಲ್ಲವೆಂದು ತಿಳಿದುಕೊಂಡುಬಿಟ್ಟೆ

ದಾನೆ- ಹುಂಜದ ಹಾಗೆ ಆಡ್ತಾನೆ' ಎಂದೆ ನಾನು, ಅರೆನಂಬಿಕೆ ಅರೆಸಂದೇಹ ದೊಂದಿಗೆ.

'ಹೋಗೋ ಹೋಗೋ, ನಿನಗೆ ಹಾಗೆಯೇ, ಮತ್ತೊಬ್ಬರು ಏನಾದರೂ ಹೆಸರುಮಾಡಿಕೊಂಡರೆ ಸಾಕು. ಅವರ ವಿಷಯಕ್ಕೆ ಇಲ್ಲದ ಹೊಟ್ಟೆಯುರಿ ಬಂದುಬಿಡುತ್ತೆ. ಅವರಲ್ಲಿ ಏನಾದರೂ ತಪ್ಪು ಹುಳುಕು ಹುಡುಕುವುದು. ಇಲ್ಲದ ಸಲ್ಲದ ಆರೋಪವನ್ನೆಲ್ಲಾ ಅವರ ಮೇಲೆ ಹೊರಿಸುವುದು.' ಎಂದಳು ಯಮುನಾ ರೇಗಿದ ಹಾಗೆ.

ನನ್ನ ಮಾತನ್ನು ಅವಳು ಒಪ್ಪದಿದ್ದುದು ನನಗೆ ದುಃಖವನ್ನುಂಟುಮಾಡಲಿಲ್ಲ. ಶ್ಯಾಮುನನ್ನು ವಹಿಸಿಕೊಂಡು ಮಾತಾಡಿದುದೂ ನನಗೆ ಸಂತೋಷವೇ! ಶ್ಯಾಮುನಿಗೆ ಜಂಭವಿದೆಯೆಂದು ನಂಬಲು ನನಗೆ ಇಷ್ಟವೇ ಇರಲಿಲ್ಲ. ಅವನಿಗೆ ಜಂಭವಿಲ್ಲವೆಂದು ನನಗೆ ನಾನೇ ನೂರು ಸಾರಿ ಹೇಳಿಕೊಂಡಿದ್ದೆ. ಈಗ ಯಮುನಳೇ ಆ ಮಾತು ಹೇಳಿದಮೇಲೆ ನನಗೆ ಆ ಮಾತಿನಲ್ಲಿ ಸಂಪೂರ್ಣ ನಂಬಿಕೆ ಬಂತು. ಆತ್ಮವಂಚನೆಗೆ ಯಾವ ಆತಂಕವೂ ಉಳಿಯಲಿಲ್ಲ. ತಕ್ಷಣ ಅವಳು ಹೇಳಿದುದನ್ನು ಒಪ್ಪಿದೆ. ನನಗೆ ಈಗ ಅನ್ನಿಸುತ್ತದೆ. ನಾವು ಉಳಿದವರ ವಿಷಯವಾಗಿ, ನಮಗೆ ಅವರು ಹೇಗಿರಬೇಕೆಂಬ ಬಯಕೆಯೋ ಅದನ್ನು ಮಾತ್ರ ನಂಬುತ್ತೇವೆ. ನಿಜವಾಗಿ ಅವರಿರುವಂತಲ್ಲ. ಯಾಕೆಂದರೆ ಪ್ರತಿ ನಿಮಿಷವೂ ನಮ್ಮ ಕಣ್ಣಿಗೆ ಮಣ್ಣೆರಚಿಕೊಳ್ಳುವುದರಲ್ಲಿಯೇ ಇದೆ ನಮ್ಮ ಬಾಳು. ಆದಕ್ಕೇ ನಾನು ಸುಮ್ಮನೆ ಯಮುನಳ ಮಾತನ್ನು ಒಪ್ಪಿದುದು. ಅವನು ಜಂಭವಿಲ್ಲದ ಸಾಧಾರಣ ಮನುಷ್ಯನಾಗಿದ್ದರೆ ಚೆನ್ನ ಎಂದು ನನಗೆ ಅನಿಸಿತ್ತು. ಅದನ್ನೇ ನಂಬಲು ಮನಸ್ಸು ಸಿದ್ಧವಾಗಿತ್ತು.

ಇದಾದಮೇಲೆ ಕೊಂಚ ಹೊತ್ತು ಯಮುನೆಯೊಂದಿಗೆ ಹರಟೆ ಹೊಡೆಯುತ್ತಿದ್ದೆ. ಅವಳು ಶ್ಯಾಮುನನ್ನು ಒಂದೇಸಮನಾಗಿ ಹೊಗಳಿದಳು. ಆ ವೇಳೆಗೆ ಲಲಿತ ಕೂಡ ಅಲ್ಲಿಗೆ ಬಂದು ಸೇರಿಕೊಂಡಳು. ಅವಳ ಕಣ್ಣಿನಲ್ಲಂತೂ ಶ್ಯಾಮುನೊಬ್ಬ ಮಹಾಪುರುಷನಾಗಿಬಿಟ್ಟಿದ್ದ. ನನಗೆ ಇದು ಕೊಂಚ ಎದೆ ಕಿವಿಚಿತು. ಅವರಿಬ್ಬರೂ ಶ್ಯಾಮುನನ್ನು ತಮಗೆ ಪರಿಚಯ ಮಾಡಿಕೊಡಬೇಕೆಂದರು. ನಾನೇನೋ ಬಾಯಲ್ಲಿ 'ಹೂ' ಎಂದರೂ ಮನ

ಸ್ಸಿನಲ್ಲಿ ಮಾತ್ರ 'ಉಹುಂ' ಎಂದುಕೊಂಡೆ. ಪರಿಚಯ ಮಾಡಿಕೊಡುವಷ್ಟು ಪರಿಚಯ ನನಗೇ ಇರಲಿಲ್ಲ. ಅದೂ ಅಲ್ಲದೆ ಅವರೊಂದಿಗೆ ಮತ್ತೆ ಯಾರು ಮಾತನಾಡುವುದೂ ನನಗಿಷ್ಟವಿಲ್ಲ.

'ಅಂದಹಾಗೆ, ಲೋ, ಅಣ್ಣನಿಂದ ಕಾಗದ ಬಂತು. ನಾನು ನಾಳೆಯ ಬೆಳಿಗ್ಗೆ ರೈಲಿಗೆ ಹಾಸನಕ್ಕೆ ಹೋಗಬೇಕು.' ಎಂದಳು ಯಮುನಾ.

'ಸರಿ' ಎಂದೆ ನಾನು ಜೋಲುಮುಖ ಹಾಕಿಕೊಂಡು. ನನ್ನನ್ನೂ ಹಾಸನಕ್ಕೆ ಕರೆಯಬಾರದೇ ಎಂದುಕೊಂಡೆ. ಆದರೆ ಅವಳು ಕರೆದರೂ ಹೋಗುವುದಾದರೂ ಹೇಗೆಂದು ನಾನು ಯೋಚಿಸಲಿಲ್ಲ.

'ಲಲಿತ?' ಕೊಂಚ ಹೊತ್ತಾದಮೇಲೆ ಮೆಲ್ಲನೆ ಕೇಳಿದೆ.

'ಅವಳಿಲ್ಲೇ ಇರ್ತಾಳೆ. ಅವಳಿಗೇನೂ ಕೆಲಸವಿಲ್ಲ ಅಲ್ಲಿ. ಇಲ್ಲಿದ್ದರೆ ಕೊಂಚ ಓದಿಯಾದರೂ ಓದಬಹುದು. ಅಲ್ಲಿಗೆ ಬಂದರೆ ಶುದ್ಧ ಸೋಮಾರಿಯಾಗಿಬಿಡ್ತಾಳೆ' ಎಂದಳು.

'ಸರಿ' ಎಂದೆ ಮತ್ತೆ.

ಲಲಿತ ಮಾತ್ರ ಕಿಲಕಿಲನೆ ನಗುತ್ತಾ ಒಳಕ್ಕೆ ಓಡಿದಳು.

ಆ ದಿನ ನನಗೆ ಆಟದಲ್ಲಿ ಕೊಂಚವೂ ಆಸಕ್ತಿಯೇ ಇಲ್ಲ. ಲಲಿತಳ ನಗುವಿನ ನೆನಪು ಮನಸ್ಸನ್ನು ಹಿಂಸೆಮಾಡುತ್ತಿತ್ತು. ಜತೆಗೆ ಯಮುನೆ ಹಾಸನಕ್ಕೆ ಯಾಕೆ ಹೋಗುವಳೋ ಎಂದು ಕಾರಣ ಹುಡುಕುತ್ತಿದ್ದೆ. ಅವಳನ್ನೇ ಕೇಳಿಬಿಟ್ಟಿದ್ದರೆ ಆಗಿತ್ತು. ಆದರೆ ಆಗ ಕೇಳುವ ಧೈರ್ಯ ಬರಲಿಲ್ಲ. ಕೇಳುವಷ್ಟು ಸಾವಧಾನವೂ ಇರಲಿಲ್ಲ. ಸಮಾಧಾನವೂ ಇರಲಿಲ್ಲ. ಇದರ ಜತೆಗೆ ಶ್ಯಾಮು ನನ್ನನ್ನು ತಾತ್ಸಾರದಿಂದ ಕಂಡುದುದೂ ತಟಕ್ಕನೆ ನೆನಪಾಗುತ್ತಿತ್ತು. ಹೀಗಾಗಿ ಆ ಸಂಜೆಯೆಲ್ಲಾ ಯೋಚನೆಯಲ್ಲೇ ಕಳೆದೆ. ರಾತ್ರಿ ಸರಿಯಾಗಿ ನಿದ್ರೆ ಬರಲಿಲ್ಲ. ಕಣ್ಣು ಬಿಟ್ಟುಕೊಂಡು ಮಲಗಿ ಸುಮ್ಮನೆ ಯೋಚನೆ ಮಾಡುತ್ತಾ ಹಾಸಿಗೆಯ ಮೇಲೆ ಹಾಗಿಂದ ಹೀಗೆ ಉರುಳಾಡುತ್ತಿದ್ದೆ.

ನಾನು ಮರುದಿನ ಕಾಲೇಜಿಗೆ ಹೊರಟಾಗ ಎಂದಿನಂತೆಯೇ ಹೊತ್ತಾಗಿತ್ತು. ನನಗೆ ಮನಸ್ಸೂ ಭಾರವಾಗಿತ್ತು. ಯಮುನಾ ಅವತ್ತೇ ಹಾಸನಕ್ಕೆ ಹೋಗುವುದಾಗಿ ತಿಳಿಸಿದ್ದಳು. ಬರುವುದು ಯಾವಾಗ ಎಂದೇನೂ ತಿಳಿಸಿರಲಿಲ್ಲ. ಯಾತಕ್ಕಾಗಿ ಹೋಗುತ್ತಿರಬಹುದೆಂಬುದೂ ನನಗೆ ಒಂದು ಸಮಸ್ಯೆಯೇ ಆಗಿತ್ತು. ಸುಮಾರು ಮದುವೆಗಾಗಿಯೇ ಇರಬಹುದೆಂದು ಮನಸ್ಸು ಒಂದೇ ಸಮನಾಗಿ ಹೊಡೆದುಕೊಳ್ಳುತ್ತಿತ್ತು. ಇರಲಾರದು. ಹಾಗಿದ್ದರೆ ಲಲಿತಳಿಗಾದರೂ ಗೊತ್ತಿರುತ್ತಿರಲಿಲ್ಲವೆ ಎಂದು ಮತ್ತೆ ಮನಸ್ಸನ್ನು ಸಮಾಧಾನಗೊಳಿಸಲು ಯತ್ನಿಸುತ್ತಿದ್ದೆ. ಆದರೂ ಹೃದಯಕ್ಕೆ ಮಾತ್ರ ಶಾಂತಿಯಿಲ್ಲ. ಏನೋ ಒಂದು ರೀತಿಯ ಕಳವಳ. ಇದರ ಜತೆಗೆ ಮನೆಯಲ್ಲಿ ಕೂಡ ಏನೇನೋ ಕೆಟ್ಟ ಮಾತು. ಅವೂ ಯಮುನಳ ವಿಷಯವಾಗಿ. ನಮ್ಮ ತಾತನಿಗಾಗಲಿ, ತಂದೆಗಾಗಲಿ ಯುಮುನಳ ಮನೆಯವರನ್ನು ಕಂಡರೇ ಆಗುತ್ತಿರಲಿಲ್ಲ. ಅವರ ಮಾತೆತ್ತಿದರೇ ಉರಿಯಾಗುತ್ತಿದ್ದರು. ಆದಿನ ಬೆಳಿಗ್ಗೆ ನಾನು ಸ್ನಾನದಮನೆಗೆ ಹೋದಾಗ ಮೂರನೆಯ ಮನೆಯ ಭಾಗೀರಥಿಬಾಯಿ ಬಂದು ನಮ್ಮ ತಾಯಿಯ ಹತ್ತಿರ ಮಾತಾಡುತ್ತಿದ್ದರು ಅವರು ಬಂದುದು ಉಪ್ಪು ಸಾಲ ತೆಗೆದುಕೊಳ್ಳುವುದಕ್ಕೆ. ಆದರೆ ಆ ಕೆಲಸವಾದಕೂಡಲೆ ಅಲ್ಲಿಂದ ಹೊರಡುವ ಮಾತೇ ಇಲ್ಲ. ಕಂತೆಪುರಾಣ ಆರಂಭವಾಯಿತು. ಹೆಂಗಸಿನ ನಾಲಿಗೆ ಸಡಿಲವಾಗಿರಲೆಂದು ಧರ್ಮರಾಯನ ಶಾಪವಂತೆ. ಅವರಲ್ಲಿ ಕೆಲವರು ಮಾತನಾಡುವುದನ್ನು ನೋಡಿದರೆ ನಾಲಗೆ ಯಾವಾಗ ಕಳಕ್ಕೆ ಬಿದ್ದು ಹೋಗುವುದೋ ಎಂದು ಹೆದರಿಕೆಯಾಗುತ್ತದೆ. ಮಾತುಮಾತಿಗೂ ಪಿಸುಗುಟ್ಟುವುದು. ಅದೂ ಮೂರು ಮನೆಗಳಿಗೆ ಕೇಳುವಷ್ಟು ಮೆತ್ತಗೆ ಗುಟ್ಟುಮಾತನ್ನು ಕಿವಿಯಲ್ಲಿ ಹೇಳುತ್ತಾರೆ. ಭಾಗೀರಥೀಬಾಯಿಯ ಗಂಟಲು ಕೊಂಚ ಆ ಜಾತಿಯದೇ. ಮಾತನ್ನೊಂದುಸಾರಿ ಆರಂಭಿಸಿದರೆಂದರೆ ನಿಲ್ಲಿಸುವುದೇ ಕಷ್ಟ.

"ನೋಡಿದ್ರೇ, ಶೇಷಮ್ಮ. ನಮ್ಮ ಬೀದೀಲೆಲ್ಲ ಇದೇ ಪುಕಾರು! ಛೆ! ಛೆ! ಛೆ! ಏಂಟೇನಮ್ಮ ಇದು. ಅಲ್ಲ! ಅಷ್ಟು ತಿಳೀಬೇಡವೇ?"

"ಅಯ್ಯೋ! ಈಗಿನ ಕಾಲವವರೇ ಅಪ್ಪ! ನೀವು ಅದನ್ನು ಹೇಳೋವಕ್ಕೆ ಹೋಗ್ತೀರಿ. ಯಾಕೆ, ನಮ್ಮ ಮನೆ ಪಕ್ಕದಲ್ಲೇ ಇಲ್ಲವೇ— ಆ ಮೋಹಿನಿಗಳು"

"ಯಾರೂಂದ್ರೆ-ಆ ಉದ್ದವಾಗಿ ಜೋಟುದ್ದದ ಜಡೆಯುವಳೊ?" ಭಾಗೀರಥಿಬಾಯಿಯ ಆಸಕ್ತಿ ಬಹಳ ಏರಿತ್ತು.

"ಅದೇ ಮೋಹಿನಿ! ನೋಡೀಂದ್ರೆ, ನಮ್ಮ ಸೀನು ಮೇಲೆ ಅದೇನುತಾನೇ ಮಾಯ ಮಾಡಿದಾಳೋ ಕಾಣೆ. ಯಾವಾಗ ನೋಡಿದರೂ ಅವಳ ಜತೇಲೇ ಮಾತು. ನಾವು ಎಷ್ಟು ಹೇಳಿದರೂ ಕೇಳೋಲ್ಲ. ಅವನಿಗೆ ಗಿಣಿಗೆ ಹೇಳಿದ ಹಾಗೆ ಹೇಳಿಯಾಯಿತು. ಬೈದಾಯಿತು. ಆದರೂ ಏನೂ ಪ್ರಯೋಜನವೇ ಇಲ್ಲ!"

"ಎಷ್ಟಿದ್ದರೂ ಕಾಲೇಜು ಮೆಟ್ಟಲು ಹತ್ತಿದ ಹುಡುಗಿ ಅಲ್ಲವೇ, ಅಂದ್ರೆ. ಅಯ್ಯೋ! ನಮ್ಮಕಾಲ ಹೀಗಿರಲಿಲ್ಲಮ್ಮ. ನಾವೇನೂ ಪ್ರಪಂಚ ಕಂಡಿಲ್ಲವೇ? ಕೇಳಿಲ್ಲವೇ? ಶಾಲೆಗೆ ಕಾಲೇಜಿಗೆ ಹೋಗಿ ಏನೋ ನಾಲ್ಕು ಮಾತು ಇಂಗ್ಲಿಷಂತೆ-ಗುಸ್‌ಪಿಸ್, ಕ್ಯಾಟ್ ರ್‍ಯಾಟ್ ಓದಿಬಿಟ್ಟರೆ ಏನೋ ಕಿರೀಟ ಕೆತ್ತಿದ ಹಾಗೆ. ಥುತ್ಸ್! ಥುತ್ಸ್! ಅವರ ವೈಯಾರ ಏನು? ಆ ಬೆಡಗೇನು-ಅಬ್ಬಾ! ನನಗೇ ನೋಡೋಕೆ ನಾಚಿಕೆಯಾಗುತ್ತೆ."

ಅಪ್ಪ ಅಂದು ಗುಟ್ಟಾಗಿ ಹೇಳುವಂತೆ ಪಿಸುಗುಟ್ಟಿದರು—"ವೈಲಿಗೆ ಯಾದರೂ ಬೆರೆಸಿಕೊಂಡು ಬಿಡ್ತಾರಲ್ಲ ಅಂದ್ರೆ. ಅಲ್ಲ ಮೂರು ದಿನ ಬೇರೆ ಕೂತಿರೋದಕ್ಕೂ ಆಗೋಲ್ಲವೇ!"

"ಕಾಲ-ಕಲಿಗಾಲ ಅಂದ್ರೆ! ನೋಡಿ ಆ ಮೋಹಿನಿ ಇದಾಳಲ್ಲ ಯಮುನೆಯೋ ಕಾವೇರಿಯೋ ಅವಳ ತಾಯಿ ಕೂಡ ಹಾಗೆ ಹಾಗೇನೇ! ಹಾಸನದಲ್ಲಿ ಅವರಮನೆ—"

"ಆ ತಾಯಿಯ ಮಗಳಲ್ಲವೇ! ಸದ್ಯ ನಿಮ್ಮ ಹುಡುಗನ್ನ ಜೋಪಾನ ವಾಗಿ ನೋಡಿಕೊಳ್ಳೀಂದ್ರೆ."

ಭಾಗೀರಥಿಬಾಯಿ ಹೊರಟು ಹೋದರು.

ಅವರ ಮಾತಿನಿಂದ ನನಗೆ ಎಷ್ಟು ಕೋಪ ಬಂತೋ ಅಷ್ಟೇ ದುಃಖವೂ ಆಯಿತು. ಉಳಿದವರ ವಿಷಯವಾಗಿ ಮಾತನಾಡಲು ಇವರಿಗೇನು ಹಕ್ಕು? ತಮ್ಮ ಮನೆಯ ಹೆಗ್ಗಣದ ರಾಶಿಯನ್ನು ಬಚ್ಚಿಟ್ಟು ಉಳಿದವರ ಮನೆಗೇಕೆ ಮೂಗಿಕ್ಕುವರೋ? ಇವರಿಗೆ ಬೇರೇನೂ ಕೆಲಸವಿಲ್ಲವೇ ಎಂದು ರೇಗಿತು. ಜತೆಗೆ ನಮ್ಮ ತಾಯಿಯು ಯಮುನೆಯನ್ನು ಹಾಗಂದರಲ್ಲ ಎಂದು ದುಃಖವಾಯಿತು.

ಮನಸ್ಸು ಕಲಕಿತ್ತು. ಸೈಕಲ್ಲು ಕೂಡ ಏನೋ ಕೆಟ್ಟುಹೋಗಿತ್ತು. ಹಾಗಾಗಿ ನಡೆದುಕೊಂಡೇ ಕಾಲೇಜಿಗೆ ಹೊರಟೆ. ದಾರಿಯುದ್ದಕ್ಕೆಲ್ಲಾ ಮೊದಲಿಗೆ ಯಮುನಳ ಯೋಚನೆಯೇ. ಬಹುದೂರದಲ್ಲಿ ಮುಂದೆ ಲಲಿತ ತನ್ನ ಸ್ನೇಹಿತೆಯರೊಡನೆ ಮಹಾರಾಣಿ ಕಾಲೇಜಿಗೆ ಹೋಗುತ್ತಿದ್ದಳು. ಸಂಜೆಗೆ ಲಲಿತ ಹೇಗಿದ್ದರೂ ಸಿಕ್ಕುವಳು. ಅವಳನ್ನು ಕೇಳಿ ತಿಳಿದುಕೊಂಡರಾಯಿತು ಎಂದುಕೊಂಡೆ. ಆದರೆ ಮನಸ್ಸಿನ ತವಕ ಕಡಿಮೆಯಾಗಬೇಕಲ್ಲ! ಎಷ್ಟು ಒದ್ದಾಡಿದರೂ ಮನಸ್ಸು ಮಾತ್ರ ಇನ್ನೂ ಕಳವಳಿಸುತ್ತಲೇ ಇತ್ತು. ಯಮುನೆಯ ಚಿಂತೆಯ ನಡುವೆ ಹಿಂದಿನ ಸಂಜೆ ಲಲಿತ ಕಿಲಕಿಲನೆ ನಕ್ಕದೂ ನೆನಪಿಗೆ ಬರುತ್ತಿತ್ತು.

ಕಾಲೇಜಿನ ಹತ್ತಿರ ಬಂದಾಗ ಶ್ಯಾಮ್ ನಿಂತಿದ್ದುದು ಕಾಣಿಸಿತು. ತಕ್ಷಣವೇ ಮನಸ್ಸು ಉಲ್ಲಾಸಗೊಂಡಿತು. ಅವನು ನನ್ನನ್ನು ಮಾತಾಡಿಸುವನೋ ಇಲ್ಲವೋ ಎಂದು ಕೊಂಚ ಸಂದೇಹ ಬಂದರೂ ಅವನ ಬಳಿಗೆ ಹೋಗದಿರುವಷ್ಟು ಹಿಡಿತ ಮನಸ್ಸಿಗಿರಲಿಲ್ಲ. ಹತ್ತಿರ ಹೋಗಿ ನಿಂತು ನಮಸ್ಕಾರ ಮಾಡಿದೆ. ಆ ನಮಸ್ಕಾರಕ್ಕೆ ಪ್ರತಿಯಾಗಿ ನಮಸ್ಕಾರ ಮಾಡಿದಾಗ ನನಗಾದ ಸಂತೋಷಕ್ಕೆ ಮಿತಿಯೇ ಇಲ್ಲ. ಅವನು ಮಾತಾಡದೆ ಹಾಗೆಯೇ ನಿಂತಿದ್ದ. ನಾನೂ ತೆಪ್ಪಗೆ ಅವನ ಮುಖವನ್ನೇ ನೋಡುತ್ತಾ ನಿಂತಿದ್ದೆ. ಹಾಗೆಯೇ ಅದೆಷ್ಟು ಹೊತ್ತು ಕಳೆಯಿತೋ ಏನೋ. ಗಂಟೆ ಹೊಡೆದ ಸದ್ದು ಕೇಳಿದೊಡನೆಯೇ ನಾನೇ ಅವನನ್ನು ಮಾತಾಡಿಸಿದೆ.

"ಗಂಟೆಯಾಯಿತು. ನಿಮಗೆ ಈಗ ಕ್ಲಾಸಿಲ್ಲವೇ?" ಎಂದೆ.

ಶುಬ್ಬು ಕೊಂಚ ಬಿಗಿದ ಅವನು. ಅದೂ ಒಂದು ಕ್ಷಣಮಾತ್ರ. ಉತ್ತರ ಕೊಡಲಿಲ್ಲ. ಕಾಲೇಜಿನ ಕಡೆಗೆ ಹೆಜ್ಜೆಯಿಟ್ಟ. ನಾನೂ ಅವನೊಂದಿಗೆ ಕಾಲೇಜಿನ ಕಡೆ ನಡೆದೆ. ಕ್ಲಾಸಿಗೆ ಹೋಗುವಾಗ "ಕ್ಲಾಸಿಗೆ ಹೋಗುತ್ತೇನೆ" ಎಂದು ಹೇಳಿ ಹೊರಟೆ. ಅವನು ತಲೆಯಲ್ಲಾಡಿಸಿದ.

ಮಧ್ಯಾಹ್ನ ವಿರಾಮವಿದ್ದಾಗ ನಾನೇ ಬೇಕೆಂತಲೇ ಅವನನ್ನು ಹುಡುಕಿದೆ. ಅದೇ ತಾನೇ ತರಗತಿಯಿಂದ ಹೊರಬಂದ ಅವನು ಯಾರೊಂದಿಗೂ ಬೆರೆಯದೆ ತಾನೇ ಬೇರೆಯಾಗಿ ಬರುತ್ತಿದ್ದ. ಅವನ ಹತ್ತಿರ ಹೋಗಿ ಹೆದರಿಕೆಯಿಂದಲೇ ಅವನನ್ನು ಕರೆದೆ. ಎಲ್ಲಿ ಅವನು ಒಪ್ಪುವುದಿಲ್ಲವೋ ಎಂದು ಮನಸ್ಸು ಕುದಿಯುತ್ತಿತ್ತು.

"ಕಾಫಿ ಕುಡಿಯ ಬರೋಣವೇ?" ಎಂದೆ ಮೆಲ್ಲನೆ, ಬೇಡಿಕೊಳ್ಳುವವನಂತೆ. ಒಂದು ಬಾರಿ ನನ್ನನ್ನೇ ದಿಟ್ಟಿಸಿ ನೋಡಿ ಅವನು ಮಾತಾಡಿದ

"ನಾನು ಕಾಫಿ ಕುಡಿಯುವುದಿಲ್ಲ".

ಅವನು ಮಾತಾಡಿದನಲ್ಲ, ಅದೇ ನನಗೆ ಸಂತೋಷ. ನಿನ್ನೆಗಿಂತ ಧ್ವನಿಕೂಡ ಕೊಂಚ ಮೃದುವಾದಂತೆ ತೋರಿತು.

"ಹಾಲು ಕುಡಿಯಬಹುದು ನೀವು" ಎಂದೆ ಕೊಂಚ ಧೈರ್ಯ ಮಾಡಿ.

ಖಂಡಿತವಾಗಿಯೂ ಈಗ ರೇಗಿಬಿಡುವನೆಂದೇ ನನ್ನ ಭಾವನೆಯಿತ್ತು. ಆದ್ದರಿಂದಲೇ ಹೇಳುವ ಮೊದಲು ಸ್ವಲ್ಪ ಹಿಂಜರಿದೆ. ಆದರೆ ಅವನು ರೇಗಲಿಲ್ಲ. ನನ್ನ ಕಡೆಗೆ ತಿರಸ್ಕಾರದಿಂದಲೂ ನೋಡಲಿಲ್ಲ. ಮರುಮಾತಿಲ್ಲದೆ "ಬನ್ನಿ" ಎಂದು ಜತೆಯಲ್ಲಿ ಬಂದುಬಿಟ್ಟ.

ಅದು ಯಾಕೆ ನನ್ನೊಂದಿಗೆ ಬಂದನೋ. ಇದುವರೆಗೂ ಇದ್ದ ತಾತ್ಸಾರದ ನಡವಳಿಕೆ, ಗರ್ವಗಳನ್ನು ಯಾತಕ್ಕಾಗಿ ಆ ಸಮಯದಲ್ಲಿ ಮರೆಸಿದನೋ ನನಗೆ ತಿಳಿಯದು. ಇಷ್ಟಾಗಿ ನಾನೂ ಅವನಿಗೆ ಹೊಸಬ. ಯಾರೊಂದಿಗೂ ಕೂಡದ ಅವನು ನಾನು ಕರೆದೊಡನೆ ನನ್ನೊಂದಿಗೆ ಬರಲೊಪ್ಪಿದುದು ನನಗೆ ಇಂದಿಗೂ ಸಮಸ್ಯೆಯೇ. ಮುಂದೆ ಎಂದೂ ಅವನು ಆ ದಿನದ ವಿಷಯ ಮಾತಾಡಲಿಲ್ಲ. ನಾನು ಅವನನ್ನು ಕೇಳಲೂ

ಇಲ್ಲ. ಅಂತೂ ಆ ದಿನ ಅವನು ನನ್ನೊಂದಿಗೆ ಬಂದ. ಅದು ನಮ್ಮಿಬ್ಬರ ಗೆಳೆತನದ ಆರಂಭ.

ಇಬ್ಬರೂ ಹೋಟಲಿನಲ್ಲಿ ಹೋಗಿ ಕುಳಿತೆವು. ಸೀತಿಂಡಿ ತರಿಸಿದೆವು. ತಿನ್ನುತ್ತಾ ಕುಳಿತಾಗ ನಾನೇ ಮಾತು ತೆಗೆದೆ. ಆಗ ನನಗೆ ಮಾತಾಡಲು ಬೇರೆ ಯಾವ ವಿಷಯವೂ ಇರಲಿಲ್ಲ. ಅವನನ್ನು ಹೊಗಳುವುದಷ್ಟೇ ನನಗೆ ಗೊತ್ತು.

"ಎಲ್ಲರೂ ನಿಮ್ಮ ಪಾತ್ರವನ್ನು ಹೊಗಳಿದರು" ಎಂದೆ.

"ಹುಂ" ಎಂದ ಅವನು ತಿಂಡಿಯನ್ನು ಬಾಯಿಗಿಟ್ಟುಕೊಳ್ಳುತ್ತಾ.

"ಮಹಾರಾಜಾ ಕಾಲೇಜಿನವರೆಲ್ಲ ನಿಮ್ಮನ್ನು ಹೊಗಳಿದ್ದೂ ಹೊಗಳಿದ್ದೇ. ನನ್ನ ಕೈಯಲ್ಲೇ ಹೊಗಳಿವಾರೆ"

"ಯಾರು ?"

"ಇಲ್ಲೇ ಜೂನಿಯರ್ ಬಿ. ಎ. ಯಲ್ಲಿ ಓದುತ್ತಿದಾರೆ. ನನ್ನ ದೂರದ ನೆಂಟರಾಗಬೇಕು. ನೀವೂ ಅವರನ್ನು ನೋಡಿರಬಹುದು."

"ಯಾರೋ ನನಗೆ ತಿಳಿಯದು"

ನಾನು ಕೂಡಲೇ ಯಮುನಳ ವಿಷಯವನ್ನು ಹೇಳಲಾರಂಭಿಸಿದೆ. ಅದೇಕೋ ಕಾಣೆ, ಅವನ ಹತ್ತಿರ ಆ ವಿಚಾರ ಹೇಳಲು ನನಗೆ ಕೊಂಚ ವಾದರೂ ಸಂಕೋಚವೇ ಆಗಲಿಲ್ಲ. ಅದೇ ತಾನೇ ಯಮುನಳ ವಿಚಾರ ಯೋಚಿಸಿ, ಮನಸ್ಸೊಂದು ಬಗೆಯಾಗಿ ಮುದುಡಿಕೊಂಡಿದ್ದುದು ಕೂಡ ಮರೆತು ಹೋಯಿತು. ಅವಳ ಬಗ್ಗೆ ಮತ್ತಾರಿಗಾದರೂ ಆಸಕ್ತಿಬಂದರೂ ನನ್ನ ಮನಸ್ಸಿಗೆ ರೋಸಿಹೋಗುತ್ತಿತ್ತು. ಹೊಟ್ಟೆಯುರಿಯಿಂದ ನಾನು ಒದ್ದಾಡುತ್ತಿದ್ದೆ. ಅಂತಹುದರಲ್ಲಿ ಅವನಿಗೆ ಹೇಳುವಾಗ ನನಗೆ ಕೊಂಚವೂ ಅಸೂಯೆಯಾಗಲಿ, ಹೊಟ್ಟೆಯುರಿಯಾಗಲಿ ಬರಲಿಲ್ಲ. ಯಮುನೆಯ ಸೌಂದರ್ಯ, ಅವಳ ಬುದ್ಧಿವಂತಿಕೆ, ಚಾಲೂಕು, ಜಾಣತನ, ಓದುಗಾರಿಕೆ ಗಳನ್ನೆಲ್ಲಾ ಹೊಗಳಿದೆ. ಜತೆಗೆ ಲಲಿತೆಯ ವಿಷಯ ಹೇಳುವುದನ್ನು ಮರೆಯಲಿಲ್ಲ. ನಾನಾ ಮಾತನ್ನೆಲ್ಲ ಹೇಳುವಾಗ ಅವನು ಬಹಳ ಆಸಕ್ತಿ ಯಿಂದ ಕೇಳುತ್ತಿದ್ದ. ಅವನ ಮುಖದಲ್ಲಿ ಈ ಆಸಕ್ತಿ ಚೆನ್ನಾಗಿ ಕಾಣು ತ್ತಿತ್ತು. ಅವರು ತನ್ನನ್ನು ಹೊಗಳಿದುದು ಅವನಿಗೆ ಬಹಳ ಹಿತವಾಗಿರ

ಬೇಕು. ಆ ಹಿಗ್ಗು ಅವನೆಷ್ಟೇ ಬಚ್ಚಿಡಲು ಯತ್ನಿಸಿದರೂ ಮುಖದಲ್ಲಿ ಕಾಣಿಸಿಕೊಳ್ಳುತ್ತಿತ್ತು. ನನಗೆ ಕೂಡ ಅದು ಗೊತ್ತಾಗಿ ಹೋಯಿತು. ಎಲ್ಲ ಕಲಾವಿದರೂ ಹೀಗೆಯೇ ಇರಬೇಕು. ಹೆಂಗಸರ ಹೊಗಳಿಕೆ ಸಿಕ್ಕಿದರೆ ಅವರಿಗೆ ಸ್ವರ್ಗವೇ ಸಿಕ್ಕಿದಂತಾಗುವುದೆಂದು ತೋರುತ್ತದೆ. ಯಾವ ಹೆಂಗಸು ತನ್ನ ಬಗ್ಗೆ ಏನು ಮಾತಾಡಿಕೊಳ್ಳುವಳೆಂದೇ ಪ್ರತಿ ಗಂಡಸಿನ ಯೋಚನೆ. ಅದರಿಂದಲೇ ಇರಬೇಕು, ಹೆಂಗಸಿನ ಮುಂದೆ ನಾವು ಗಾಂಭೀರ್ಯ ತಳೆಯುವುದು. ನೆಟ್ಟದೇಹ ಮಾಡಿಕೊಂಡು ನಡೆಯುವುದು. ಅಂತೂ ಇಷ್ಟು ಮಾತ್ರ ನಿಜವೆಂದು ತೋರುತ್ತದೆ, ಕಲಾವಿದರೆಲ್ಲರಿಗೂ ಹೆಂಗಸರಿಂದ ಹೊಗಳಿಸಿಕೊಳ್ಳುವ ವ್ಯಾಮೋಹ ಬಹಳ.

ಅವನು ನಾನು ಮಾಡಿದುದಕ್ಕೆಲ್ಲ 'ಹೂಂ' ಎನ್ನುತ್ತಿದ್ದನೇ ಹೊರತು ಮತ್ತೇನೂ ಹೇಳುತ್ತಿರಲಿಲ್ಲ. ಸುಮ್ಮನೆ ಕೇಳುತ್ತಾ ಕುಳಿತಿದ್ದ. ತಿಂಡಿತಿಂದಾದಮೇಲೆ ಹಾಲು ತರಿಸಿ ಕುಡಿದೆವು. ಬಿಲ್ ಕೊಡಲು ನಾನು ದುಡ್ಡು ತೆಗೆದಾಗ ಅವನು ತಾನೇ ಕೊಡಲು ಮುಂದೆ ಬಂದ. ನನಗೆ ಮಾತ್ರ ಅದು ಸಹಿಸಲಿಲ್ಲ. ನಾನು ಅವನನ್ನು ಕರೆದುದು. ಅವನು ಹಣ ಕೊಡುವುದು ಸರಿಯಲ್ಲವೆಂದು ನಾನು ವಾದ ಹೂಡಿದೆ. ಆದರೆ ಅವನು ಕೇಳಲಿಲ್ಲ. ತಾನೇ ಹಣ ಕೊಟ್ಟ. ಇನ್ನೊಂದು ಬಾರಿ ನಾನು ಕೊಟ್ಟರಾಯಿತು ಎಂದ. ಇದರಿಂದ ಮತ್ತೊಂದು ಬಾರಿ ನನ್ನ ಜತೆಯಲ್ಲಿ ಅವನು ಬರುವನೆಂದು ನನಗೆ ಸಂತೋಷವಾಯಿತು. ಅವನಲ್ಲಿ ನನಗಿದ್ದ ಗೌರವ ಕೂಡ ಹೆಚ್ಚಾಯಿತು. ಇಬ್ಬರೂ ತರಗತಿಗೆ ಹೋಗುವ ಹೊತ್ತಿಗೆ ನನ್ನ ಮನಸ್ಸಿಗೆ ಸಂತೋಷ ಹೇಳತೀರದು. ಬೆಳಗಿನ ಸಪ್ಪೆ ಮನಸ್ಸು ಈಗ ಹಿಗ್ಗಿತ್ತು. ಮಧ್ಯಾಹ್ನದ ಚಿಂತೆ, ಯೋಚನೆಯೆಲ್ಲ ದಿಕ್ಕಾಪಾಲಾಗಿತ್ತು. ತರಗತಿಯಲ್ಲಿ ಕುಳಿತಾಗ ಅಧ್ಯಾಪಕರ ಮಾತು ಕೇಳುತ್ತಲೇ ಇರಲಿಲ್ಲ. ಕೇಳಿದರೂ ಯಾವುದೋ ಪಾತಾಳದಿಂದ ಬಂದ ಧ್ವನಿಯಂತೆ. ತರಗತಿಯಲ್ಲಿ ಕುಳಿತಂತಯೇ ಮನಸ್ಸು ಕನಸು ಕಟ್ಟುತ್ತಿತ್ತು. ನಮ್ಮಿಬ್ಬರ ಗೆಳೆತನ ಹೀಗಾಗುತ್ತದೆ, ಹಾಗಾಗುತ್ತದೆಂದೆಲ್ಲ ಹಗಲುಗನಸುಗಳು,

ಮಧ್ಯಾಹ್ನ ಅವನೊಂದಿಗೆ ಕುಳಿತ ದೃಶ್ಯ ಕಣ್ಣಿಗೆ ಕಟ್ಟಿತ್ತು. ಹೀಗಾಗಿ ಪಾಠ ಏನೂ ಕೇಳಲೇ ಇಲ್ಲ.

ಆ ದಿನ ಸಂಜೆ ಮನೆಗೆ ಹಿಂತಿರುಗುವಾಗ ಕೂಡ ಅವನ ಯೋಚನೆಯೇ. ಅವನೊಂದಿಗೆ ಆರಂಭವಾದ ಈ ಗೆಳೆತನವನ್ನು ಹೇಗಾದರೂ ಹೆಚ್ಚಿಸಿಕೊಳ್ಳಬೇಕು. ಹೇಗಾದರೂ ಸರಿ ಬೆಳೆಸಬೇಕೆಂದು ತೀರ್ಮಾನಿಸಿದೆ. ಅದನ್ನು ಹೇಗೆ ಮಾಡಬೇಕೆಂಬುದು ಯೋಚನೆಗೇ ಬರಲಿಲ್ಲ. ಗೆಳೆತನದ ಸುಂದರ ಸ್ವಪ್ನದ ನೂರು ಬಣ್ಣ ಮಾತ್ರ ಕಣ್ಣಿಗೆ ಕಟ್ಟುತ್ತಿತ್ತು. ಆ ಸಂತೋಷದಲ್ಲಿ, ಹಿಗ್ಗಿನಲ್ಲಿ, ಅವನೊಂದಿಗೆ ಕಾಫಿ ಕುಡಿದ ನೆನಪಿನಲ್ಲಿ ಉಳಿದುದೆಲ್ಲ ಮುಳುಗಿಹೋಗಿತ್ತು. ಯಮುನೆಯ ವಿಷಯವನ್ನು ಲಲಿತಳ ಬಳಿ ಕೇಳುವೆನೆಂದುಕೊಂಡಿದ್ದುದು ಕೂಡ ಮರೆತುಹೋಯಿತು. ಲಲಿತಳನ್ನು ಆ ಸಂಜೆ ನಾನು ನೋಡಲೇ ಇಲ್ಲ.

ಸಂಜೆ ಟೆನ್ನಿಸ್ ಆಡಲು ಎಂದಿನಂತೆಯೇ ಹೋದೆ. ಮೊದಲಿಗಿಂತ ಹೆಚ್ಚು ಹುರುಪು, ಉತ್ಸಾಹ ಆ ದಿನ. ನಾನಿನ್ನೂ ಆಟಕ್ಕೆ ಹೊಸಬನಾದರೂ ಈಗಾಗಲೇ ಒಳ್ಳೆಯ ಆಟಗಾರನೆಂದು ಹೆಸರು ಪಡೆದಿದ್ದೆ. ನನ್ನ ಜತೆಯಲ್ಲಿ ಆಡಲು ಉಳಿದವರಿಗೊಂದು ಹೆಮ್ಮೆ, ಸೋಲುವೆವೆನ್ನುವ ಹೆದರಿಕೆ. ನನ್ನನ್ನು ಸೋಲಿಸಿದರೆ ಒಂದು ಬಗೆಯ ಗೌರವ ತಮಗೆ ಸಿಗುವುದೆನ್ನುವ ಆಸೆ. ಎಂ. ಜಿ. ಎಸ್. ಪಂದ್ಯಕ್ಕೆ ನಾನು ಆ ವರ್ಷ ಹೋಗುವುದಂತೂ ಖಂಡಿತವೇ ಆಗಿತ್ತು. ನನ್ನ ಎದುರಾಳಿ ಶಂಕರ್ ಕೂಡ ಸೊಗಸಾಗಿ ಆಡುತ್ತಿದ್ದ. ಆವತ್ತು ಅವನೂ ಕೂಡ ನನ್ನ ಆಟಕ್ಕೆ ತತ್ತರಿಸಿ ಹೋದ. ನನಗೆ ಅಷ್ಟು ಹುಮ್ಮಸ್ಸು. ಕಾರಣವಿಷ್ಟೇ. ಕಾಲೇಜು ಬಳಿಯಲ್ಲಿ ಶ್ಯಾಮ್ ನಿಂತು ನಾವು ಆಟವಾಡುವುದನ್ನೇ ನೋಡುತ್ತಿದ್ದ. ಅವನಿಂದ ಒಂದು ಹೊಗಳಿಕೆಯ ಮಾತು ಬಂದರೆ ಸಾಕು. ನನ್ನ ಆಟವನ್ನು ನೋಡಿ ಅವನು ಮೆಚ್ಚಬೇಕು ಎಂದು ನಾನು ಎಂದಿಗಿಂತಲೂ ಜೋರಾಗಿ ಆಡುತ್ತಿದ್ದೆ. ಆಟ ಮುಗಿದೊಡನೆಯೇ ಅವನನ್ನು ಮಾತಾಡಿಸುತ್ತೇನೆಂದೂ ಆಸೆಯಿಟ್ಟುಕೊಂಡಿದ್ದೆ. ಆದರೆ ನಾನು ಆಟ ಮುಗಿಸುವ ವೇಳೆಗೆ ಅವನು ಹೊರಟುಹೋಗಿದ್ದ.

ಮರುದಿನ ಬೆಳಿಗ್ಗೆ ಲಲಿತಳನ್ನು ನೋಡಲು ಪ್ರಯತ್ನಪಟ್ಟೆ. ಆದರೆ ಆಗಲಿಲ್ಲ. ಯಮುನಾ ಊರಿಗೆ ಯಾಕೆ ಹೋದಳೋ ಎನ್ನುವ ಯೋಚನೆ ತಲೆಯನ್ನು ತಿಂದುಹಾಕುತ್ತಿತ್ತು. ಬೆಳಿಗ್ಗೆಯೆಲ್ಲಾ ಲಲಿತಳನ್ನು ಕಾಣಲೆಂದು ಹೊರಗೇ ಕಾದೆ. ಆದರೆ ಆ ಮಹರಾಯತಿ ಹೊರಕ್ಕೆ ಕಾಲೇ ಇಡಲಿಲ್ಲ. ಬೆಳಿಗ್ಗೆ ಸುಮ್ಮನೆ ಕಾಲ ವ್ಯರ್ಥಮಾಡಿದಂತಾಯಿತು. ಜತೆಗೆ ಮನಸ್ಸಿಗೆ ಬೇಸರವಾಯಿತು. ಸುಮ್ಮನೆ ಈಗ ಬಂದಾಳು, ಆಗ ಬಂದಾಳೆಂದು ಆಸೆಯಿಟ್ಟು ಕಾದು ನಿರಾಶೆಪಟ್ಟು ತಲೆ ಚಿಟ್ಟುಹಿಡಿದಿತ್ತು. ವಿಪರೀತ ಬೇಜಾರಾಗಿತ್ತು. ಹಾಗೂ ಹೀಗೂ ಒಂದಿಷ್ಟು ಅನ್ನ ತಿಂದು ಕಾಲೇಜಿನ ಕಡೆಗೆ ಹೊರಟೆ. ಮನಸ್ಸಿನಲ್ಲಿ ಹಲವಾರುಬಗೆಯ ಚಿಂತೆಗಳು. ಯಮುನೆಯ ಚಿಂತೆಯ ಜತೆಗೆ ಈ ಕಡೆಗೆ ಶ್ಯಾಮನ ಚಿಂತೆ ಬೇರೆ. ನಿನ್ನೆ ನನ್ನ ಆಟ ನೋಡಿದ. ಏನೆಂದುಕೊಂಡಿರುವನೋ ಏನೋ ಎನ್ನುವ ಸಂದೇಹ. ಅದನ್ನು ತಿಳಿಯುವ ಮಹದಿಚ್ಛೆ. ಮಧ್ಯೆ ಮಧ್ಯೆ ಏನೋ ಹೇಳಲಾರದ ಒಂದು ಕಳವಳ. ಹೀಗಾಗಿ ಅರೆಮರೆವಿನಲ್ಲೇ ಕಾಲೇಜಿಗೆ ಹೋಗುತ್ತಿದ್ದೆ. - ಮನೆ ದಾಟಿ ಕೊಂಚ ದೂರ ಹೋಗಿದ್ದೆ. ಅಷ್ಟರಲ್ಲೇ ಹಿಂದಿನಿಂದ ಕೂಗು.

''ಶ್ರೀನಿವಾಸನ್, ಶ್ರೀನಿವಾಸನ್''

ದನಿ ಅವನದೇ! ನಿಶ್ಚಯವಾಗಿ ಅವನೇ ಕೂಗಿದುದು. ನನ್ನ ಕಿವಿಯನ್ನೇ ನಾನು ನಂಬದಾದೆ. ಹೃದಯ ಒಂದೇಬಾರಿಗೆ ಉಲ್ಲಾಸದಿಂದ ಹಿಗ್ಗಿತು. ಹಿಂದಿರುಗಿದೆ. ಅವನು ಕೈ ಮೇಲೆತ್ತಿ ನಿಲ್ಲಿರೆಂದ. ನಾನು ಸಂತೋಷದಿಂದ ವೈಮರೆತವನು ನಿಂತಲ್ಲಿಯೇ ಹಾಗೆಯೇ ನಿಂತೆ. ಅವನು ಬಂದು ನನ್ನ ಬಳಿ ನಿಂತು ನಕ್ಕಾಗ ಕೂಡ ನನಗೆ ಆ ವೈಮರೆವು ಹೋಗಲಿಲ್ಲ. ಅವನಾಗಿಯೇ ನನ್ನನ್ನು ಕೂಗಿ ನಿಲ್ಲಿಸಿಕೊಂಡನಲ್ಲ ಎನ್ನುವ ಸಂತೋಷದಲ್ಲಿ ಆವನು ಹತ್ತಿರ ಬಂದುದು, ಅವನ ಜೊತೆಯಲ್ಲೇ ಕಾಲೇಜಿಗೆ ನಡೆದುಕೊಂಡು ಹೋದುದು ಕೂಡ ನನಗೆ ಹೆಚ್ಚೆನಿಸಲಿಲ್ಲ. ಸುಮ್ಮನೆ ಅವನಂದುದಕ್ಕೆಲ್ಲಾ ಯಾಂತ್ರಿಕವಾಗಿ ಉತ್ತರ ಕೊಡುತ್ತಿದ್ದೆ.

ನನಗೆ ಇದು ಇಷ್ಟು ಚೆನ್ನಾಗಿ ನೆನಪಿರಲು ಕಾರಣವೊಂದಿದೆ. ಅಂದು ನನಗೆ ಬಹಳ ಸಂತೋಷದ ದಿನ. ನನಗೆ ಇದುವರೆಗೂ ಕಾಗದ ಬರೆ

ಯದ ಯಮುನಾ, ಆ ದಿನ ನನಗೇ ಒಂದು ಕಾಗದ ಬರೆದಿದ್ದಳು. ಹಾಸನ ದಿಂದ ಬರೆದ ಕಾಗದ ನನಗೆ ಮಧ್ಯಾಹ್ನ ತಲುಪಿತು. ಈ ಆನಂದಕ್ಕೆ ಕೊಂಚ ಮೊದಲಿಗೇ ಅವನ ಜತೆಯಲ್ಲಿರುವ ಹಿಗ್ಗು ಕೂಡ ನನಗೆ ದೊರ ಕಿದ್ದು. ಈ ಎರಡು ಅವಕಾಶಗಳೂ ಒಂದಿಗೇ ನನಗೆ ಬಂದುದರಿಂದ ಆ ದಿನ ನನ್ನ ನೆನಪಿನಲ್ಲಿ ಅಚ್ಚಳಿಯದೆ ಉಳಿದಿದೆ. ಈಗ, ಬಹಳ ವರ್ಷ ಗಳಾದಮೇಲೆ ಅವರ ವಿಷಯ ಬರೆಯುತ್ತಿರುವಾಗ ನನ್ನ ಮುಂದೆ ಆ ಕಾಗದ ಹಾಗೆಯೇ ಇದೆ. ಅಷ್ಟೊಂದು ಆನಂದ ತರುವಂತಹ ಸುದ್ದಿ ಅದರಲ್ಲೇನೂ ಇಲ್ಲ. ಊರಿಗೆ ಸುಖವಾಗಿ ತಲುಪಿದೆ. ಅಮ್ಮನಿಗೆ ಕೊಂಚ ಮೈ ಚೆನ್ನಾ ಗಿಲ್ಲ. ಇನ್ನೂ ನಾಲ್ಕುದಿನ ಇದ್ದು ಬರುತ್ತೇನೆ. ಅಷ್ಟರೊಳಗೆ ನನ್ನನ್ನು ಮರೆತುಬಿಡಬೇಡವೆಂದು ಬರೆದಿದ್ದಳು. ಇನ್ನೂ ನಾಲ್ಕುದಿನ ಅಲ್ಲಿಯೇ ಇರುವಳೆಂಬುದು ದುಃಖದ ಸಂಗತಿಯಾದರೂ ಕೊನೆಯ ಮಾತು ನನ್ನನ್ನು ಸಪ್ತಮ ಸ್ವರ್ಗಕ್ಕೇ ಏರಿಸಿಬಿಟ್ಟಿತು. ಯಮುನಾ ನನಗೆ ಕಾಗದ ಬರೆದಿ ದಾಳೆ. ಮರೆಯಬೇಡವೆಂದು ಹೇಳಿದಾಳೆ. ನನಗೆ ಕಾಗದ ಬರೆದಿದಾಳೆ. ನನಗೆ ನಾನೇ ನೂರುಬಾರಿ ಆ ಮಾತನ್ನು ಹೇಳಿಕೊಂಡೆ. ಒಂದೊಂದು ಬಾರಿ ಹೇಳಿಕೊಂಡಾಗಲೂ ಹೆಚ್ಚು ಸಂತೋಷ. ಒಮ್ಮೊಮ್ಮೆ ಆ ಮಾತು ಅಂದುಕೊಂಡಾಗಲೂ ಆ ಮಾತಿನ ಸವಿ ಹೆಚ್ಚುತ್ತಿತ್ತು. ಈ ಕಾಗದ ಬಂದುದರಿಂದ ಆ ದಿನ ನಡೆದುದು ನನಗೆ ಚೆನ್ನಾಗಿ ನೆನಪಿನಲ್ಲಿದೆ.

ಕಾಲೇಜಿಗೆ ಹೋದಮೇಲೆ ಅವನು ಬೇರೆಯಾದ. ಪಾಠಗಳೆಲ್ಲಾ ಆದಮೇಲೆ ಸಿಕ್ಕುವುದಾಗಿ ಹೇಳಿ ನಾನೂ ತರಗತಿಗೆ ಹೋದೆ. ಪಾಠದ ಮೇಲೆ ಗಮನವೇ ಇರಲಿಲ್ಲವೆಂದು ಹೇಳಲಾರೆ. ಆದರೆ ಅವನ ವಿಷಯ ಚಿಂತಿಸುವುದೂ ಕಡಿಮೆಯಾಗಿರಲಿಲ್ಲ. ಮನಸ್ಸು ಎರಡು ಆಸಕ್ತಿಗಳ ನಡುವೆ ತೂರುತ್ತಿತ್ತು.

ಮಧ್ಯಾಹ್ನ ಸಿಕ್ಕಿದಾಗ ಅವನು ಯಾಕೋ ಮತ್ತೆ ಸೆಟೆದುಕೊಂಡಿದ್ದ. ಅಷ್ಟಾಗಿ ಸಲಿಗೆಯಿಂದಿರಲಿಲ್ಲ. ಬಹಳ ಬಿಗುವಿನಿಂದಲೇ ಇದ್ದ. ಆಗ ನಮ್ಮಿ ಬ್ಬರಿಗೂ ಒಂದು ಸಣ್ಣ ಜಗಳವೇ ಆಗಿಹೋಯಿತೆನ್ನಬಹುದು. ಅದನ್ನು ಜಗಳವೆಂದು ಕರೆಯುವುದೂ ತಪ್ಪಿರಬಹುದು. ನನಗೆ ಅವನನ್ನು ಕಂಡರೆ ಪೂಜಾಭಾವನೆ ಬಂದುಬಿಟ್ಟಿತ್ತೆಂದು ಹೇಳಬೇಕಾಗಿಯೇ ಇಲ್ಲ. ಅಂತ

ಹುದರಲ್ಲಿ ಅವನನ್ನೆದುರು ಹಾಕಿಕೊಳ್ಳುವುದು ನನ್ನಿಂದ ಆಗದ ಕೆಲಸ. ಇಬ್ಬರೂ ಹೋಟೆಲಿಗೆ ಹೋದೆವು. ತಿಂಡಿ ತರಿಸಿದೆವು. ನನಗೆ ಎರಡು ಬೋಂಡ, ಅವನಿಗೆ ಎರಡು ಬೋಂಡ ತಂದಿರಿಸಿದ ಹುಡುಗ.

''ನನಗೆ ಒಂದೇ ಸಾಕು. ನೀವೇ ಇನ್ನೊಂದು ತೆಗೆದುಕೊಳ್ಳಿ'' ಎಂದ ಅವನು.

''ಇಲ್ಲ, ನನಗೂ ಹೆಚ್ಚಾಗಿ ಹೋಗುತ್ತದೆ. ಬೇಡ.'' ಎಂದೆ ನಾನು.

ಆದರೆ ಅವನು ಬಿಡಲಿಲ್ಲ. ಬಲವಂತ ಮಾಡಲಾರಂಭಿಸಿದ. ನಾನೂ ಬಲವಾಗಿಯೇ ಪಟ್ಟು ಹಿಡಿದೆ. ಒಂದೊಂದು ಬಾರಿ ಬಹಳ ಹೇಡಿತನವಿರುವವರೂ ಧೈರ್ಯ ತೋರಿಬಿಡುತ್ತಾರೆ. ಹಾಗೆಯೇ ನಾನೂ ಕೂಡ ಆಕ್ಷಣದಲ್ಲಿ ಹಟ ಹಿಡಿದೆ. ನನ್ನದು ಮೊಂಡುತನವೆಂದರೆ ಅವನದೂ ಅದೇ. ಈ ಮೊಂಡಾಟದಲ್ಲಿ ಯಾರೂ ಸೋಲುವಂತೆಯೂ ಇರಲಿಲ್ಲ, ಗೆಲ್ಲುವಂತೆಯೂ ಇರಲಿಲ್ಲ. ತಿಂಡಿಯನ್ನು ಇಬ್ಬರೂ ಮುಟ್ಟಲಿಲ್ಲ. ಆ ವೇಳೆಗೆ ಹುಡುಗ ಹಾಲನ್ನು ಕೂಡ ತಂದಿಟ್ಟ. ನಾನು ಅವನ ಮಾತನ್ನು ಒಪ್ಪುವುದು ಅವನ ಗರ್ವಕ್ಕೆ, ಗೌರವಕ್ಕೆ ಕುಂದು ತಂದಂತೆ. ಅವನಿಗೆ ಅವಮಾನ ಮಾಡಿದಂತೆ ಎಂದು ಅವನ ಮತ. ನಾನು ನುಡಿದುದೇ ಸರಿಯೆಂದು ನನ್ನ ಮತ. ಹೀಗಾಗಿ ತಿಂಡಿಯನ್ನೂ ತಿನ್ನಲಿಲ್ಲ. ಹಾಲನ್ನೂ ಕುಡಿಯಲಿಲ್ಲ. ಒಬ್ಬರಿಗೊಬ್ಬರು ಮಾತು ಕೂಡ ಇಲ್ಲದೆ ಎದುರುಬದುರಾಗಿ ಕುಳಿತಿದ್ದೆವು. ಗಂಟೆ ಹೊಡೆದೊಡನೆಯೇ ಇಬ್ಬರೂ ಎದ್ದೆವು. ಬಿಲ್ಲು ಮಾತ್ರ ಕೊಡಲು ಮರೆಯಲಿಲ್ಲ. ಇಂದು ನನ್ನ ಹಣ. ಆದರೆ ತಿಂಡಿ ಮಾತ್ರ ಒಬ್ಬರೂ ತಿನ್ನಲಿಲ್ಲ.

ಈ ಪ್ರಸಂಗದಿಂದ ಮಧ್ಯಾಹ್ನ ನನ್ನ ಮನಸ್ಸಿಗೆ ಬಹಳ ರೋಸಿ ಹೋಗಿತ್ತು. ಆಕ್ಷಣದಲ್ಲಿದ್ದ ಹಟ ಅನಂತರ ಕರಗಿ ಹೋಗಿತ್ತು. ಧೈರ್ಯ ಮಾಸಿ ಹೋಗಿತ್ತು. ಇನ್ನು ನಮ್ಮಿಬ್ಬರ ನಡುವೆ ತಿರುಗಿ ಯಾವ ತೆರೆ ಬಂದುಬಿಡುವುದೋ, ಈಗತಾನೇ ಆರಂಭವಾಗುತ್ತಿರುವ ಗೆಳೆತನ ಮೊಳೆಯಲ್ಲೇ ಹಾಳಾಗುವುದೇನೋ ಎನ್ನುವ ಹೆದರಿಕೆಯೂ ಇತ್ತು. ಇದರಿಂದ ತರಗತಿಯಲ್ಲಿ ಕುಳಿತಾಗ ನನ್ನ ಮನಸ್ಸು ಬಹಳ ತಳಮಳಗೊಂಡಿತ್ತು. ಕೂಡಲೆ ಅವನಲ್ಲಿ ಕ್ಷಮೆ ಬೇಡಬೇಕೆಂದೂ ತೀರ್ಮಾನಿಸಿದೆ. ತರಗತಿಯಿಂದ ಹೊರಬಂದಮೇಲೆ ಅವನಿಗಾಗಿ ಅಲ್ಲಿಯೇ ಕೊಂಚ ಹೊತ್ತು ಕಾದು

ನೋಡಿದೆ. ಆದರೆ ಅವನು ಸಿಗಲಿಲ್ಲ. ಪಶ್ಚಾತ್ತಾಪ, ದುಃಖ, ತಪ್ಪುಮಾಡಿದ ಹೃದಯದ ಭಾರ ಹೊತ್ತು ಮನೆಗೆ ಹಿಂತಿರುಗಿದೆ. ಮನಸ್ಸೇನೋ ಒಂದು ಬಗೆಯಾಗಿತ್ತು. ಆದರೆ ಮನೆಗೆ ಬಂದೊಡನೆಯೇ ಈ ದುಗುಡ ಮಾಸಿ ಹೋಗುವಂತೆ ಯಮುನಳ ಕಾಗದ ಸಿಕ್ಕಿತು. ಅವಳ ಕಾಗದ ಓದುತ್ತಾ ಓದುತ್ತಾ ಅವನೊಂದಿಗೆ ಆದ ಕಲಹದ ಚಿಂತೆ, ಭಾರ ತಗ್ಗಿತು.

ನಾನು ಟೆನ್ನಿಸಿಗೆ ಹೋಗುವಾಗ ದಾರಿಯಲ್ಲಿ ಅವನು ಸಿಕ್ಕಿದ. ಆದೇ ತಾನೇ ಕಾಲೇಜಿನಿಂದ ಬರುತ್ತಿದ್ದ. ದೂರದಲ್ಲಿ ಅವನನ್ನು ಕಂಡೊಡನೆಯೇ ಮನಸ್ಸು ತುಡಿದುಕೊಳ್ಳುತ್ತಿತ್ತು. ನಾನು ಮಾತನಾಡಿಸಿದರೂ ಮಾತನಾಡಿಸುವನೋ ಇಲ್ಲವೊ? ನನ್ನಮೇಲೆ ರೇಗಿರುವನೇನೋ? ಮಾತನಾಡಿಸದಿದ್ದರೆ ಹೇಗೋ ಎಂದುಕೊಂಡೇ ಇದ್ದೆ. ಅವನು ಹತ್ತಿರ ಬಂದೊಡನೆಯೇ ತಾನೇತಾನಾಗಿ ಕಾಲುಗಳು ನಿಂತವು. ಅವನು ನನ್ನ ಕಡೆಗೊಮ್ಮೆ ಬಿರುನೋಟ ಬೀರಿದ. ನೀನು ಮಾಡಿದ ತಪ್ಪಿಗೆ ಶಿಕ್ಷೆ ಅನುಭವಿಸುವೆ ಎನ್ನುವಂತಿತ್ತು, ಅವನ ನೋಟ. ನನ್ನನ್ನು ಕಂಡೂ ಹಾಗೆಯೇ ಹೆಜ್ಜೆಯಿಡಲು ಪ್ರಯತ್ನಿಸಿದ. ನನಗಿನ್ನು ತಡೆಯಲಾಗಲಿಲ್ಲ. ನಾನೇ ಅವನ ಜತೆಯಲ್ಲಿ ನಡೆದೆ. ನನ್ನದು ತಪ್ಪಾಯಿತು. ಮತ್ತೆಂದೂ ಹಾಗೆ ಮಾಡುವುದಿಲ್ಲ. ನಮ್ಮಿಬ್ಬರ ಗೆಳೆತನಕ್ಕೆ ನಡುವೆ ಇದು ಬರಕೂಡದೆಂದು ಕೇಳಿಕೊಂಡೆ. ನನ್ನ ಈ ಮಾತಿನಿಂದ ಅವನ ಗರ್ವಕ್ಕೆ ಮತ್ತೊಂದು ಕಲರ್ ಕೊಟ್ಟಂತಾಗಿರಬೇಕು. ಕತ್ತನ್ನೊಮ್ಮೆ ಕೊಂಕಿಸಿದ. ನಾನೂ ಅವನೊಂದಿಗೆ ಬಹಳ ದೂರ ಹೋದೆ. ಅವನು ತೆಪ್ಪಗೆ ಮಾತಿಲ್ಲದೆ ನನ್ನ ಮಾತು ಕೇಳುತ್ತಿದ್ದ. ದಾರಿಗೆ ಬಂದ ಇವನು ಎಂದುಕೊಂಡಿರಬೇಕು ಅವನು. ಇಲ್ಲದಿದ್ದರೆ ಅವನು ಆಗ ನನ್ನೊಂದಿಗೆ ಮಾತೇ ಆಡುತ್ತಿರಲಿಲ್ಲ. ಕೊನೆಗೆ ನಾನು ಇನ್ನು ಹೊತ್ತಾಗುತ್ತದೆ. ಟೆನ್ನಿಸಿಗೆ ಹೋಗಬೇಕೆಂದು ಹೇಳಿ ಹೊರಟೆ. ಅವನು ಎರಡು ನಿಮಿಷ ತಡೆದು ನನ್ನ ಕಡೆಗೇ ನೋಡುತ್ತಾ ಆಟ ಮುಗಿಯುವ ಹೊತ್ತಿಗೆ ತಾನು ಬರುವುದಾಗಿಯೂ, ತನಗಾಗಿ ನಾನು ಕಾಯಬೇಕೆಂದೂ ಹೇಳಿದ. ಬದುಕಿದೆ ನಾನು ಎಂದು ನಾನು ನಿಟ್ಟುಸಿರು ಬಿಟ್ಟೆ. ಆಗಲೇ ನಾನು ಅವನಿಗೆ ಯಮುನೆಯ ಕಾಗದದ ವಿಷಯ ಹೇಳಿದುದು ಕೂಡ. ನನ್ನ ಆಟದ ವಿಷಯವಾಗಿ ನಾನು

ಕೇಳದಿದ್ದರೂ ಅವನಾಗಿಯೇ ಪ್ರಶಂಸೆಮಾಡಿದುದೂ ಆಗಲೇ. ಆ ಸಣ್ಣ ಘಟನೆಯಿಂದ ನಮ್ಮಿಬ್ಬರ ಗೆಳೆತನ ಬೇಗನೆ ಬೆಳೆಯಲು ಅನುಕೂಲವಾಯಿತೆಂದು ಖಂಡಿತವಾಗಿ ಹೇಳಬಲ್ಲೆ. ಆದಿನ ಕಳೆದಷ್ಟು ಆನಂದದಿಂದ ನಾನು ಆದಕ್ಕೆ ಮೊದಲು ಎಂದೂ ಕಳೆದಿರಲಿಲ್ಲ!

ಇದಾದಮೇಲೆ ನಮ್ಮಿಬ್ಬರ ಗೆಳೆತನ ಬಹುಬೇಗ ಬೆಳೆಯಿತು. ಅವನ ಗರ್ವ, ಹೆಡಸು ಇದ್ದರೂ ನನ್ನೊಂದಿಗೆ ಮಾತ್ರ ಬಹಳ ಸೌಜನ್ಯದಿಂದಲೇ ಇದ್ದ. ಬೇಕಾದಷ್ಟು ಮಾತಾಡುತ್ತಿದ್ದ. ನಗುತ್ತಿದ್ದ. ಪ್ರತಿನಿತ್ಯವೂ ಇಬ್ಬರೂ ಜತೆಯಲ್ಲೇ ಕುಳಿತು ತಿಂಡಿ ತಿನ್ನುತ್ತಿದ್ದೆವು. ಸಂಜೆ ತರಗತಿಯ ಪಾಠಗಳೆಲ್ಲಾ ಮುಗಿದಮೇಲೆ ಇಬ್ಬರೂ ಜತೆಯಲ್ಲಿ ಮನೆಯ ಕಡೆ ಹೋಗುತ್ತಿದ್ದೆವು. ನಾನು ಆಟವಾಡುತ್ತಿದ್ದಾಗಲೋ, ಆಟ ಮುಗಿಸುವ ವೇಳೆಗೋ ಬರುತ್ತಿದ್ದ. ಇಬ್ಬರೂ ಜತೆಯಲ್ಲಿ ಅಷ್ಟು ದೂರ ಸುತ್ತಿಕೊಂಡು ಬರುತ್ತಿದ್ದೆವು. ನಾವು ಆಗ ಹೆಚ್ಚು ಮಾತಾಡುತ್ತಲೇ ಇರಲಿಲ್ಲ. ಮಾತನಾಡಿದರೂ ಕೂಡ ಅವನ ಪಾತ್ರಗಳು, ಮುಂದೆ ಯಾವ ನಾಟಕ ಆಡುವರೆನ್ನುವುದು, ಆ ಉಪಾಧ್ಯಾಯರು, ಈ ಉಪಾಧ್ಯಾಯರ ಮೇಲೆ ಟೀಕೆ. ಅದೂ ಇಲ್ಲದಿದ್ದರೆ ನನ್ನ ಆಟಗಾರಿಕೆ, ಪಠ್ಯ ಪುಸ್ತಕಗಳ ವಿಷಯ. ಅವನ ಆಗಿನ ಮಾತುಕತೆಯಲ್ಲಿ ಹೆಂಗಸರ ವಿಷಯವನ್ನೇ ಎತ್ತುತ್ತಿರಲಿಲ್ಲ. ಅವನು ಹೆಂಗಸರ ಬಗ್ಗೆ ಎಷ್ಟೊಂದು ಬಿಗಿ ಮನಸ್ಸುಮಾಡಿದ್ದನೆಂದು ಆಗ ನನಗೆನ್ನಿಸುತ್ತಿತ್ತು. ಉಳಿದ ವಿದ್ಯಾರ್ಥಿಗಳಿಗೆ ಮಾತಿಗೆ ಮುಖ್ಯವಸ್ತು ಹೆಂಗಸರು. ಅವನು ಆ ವಿಷಯವನ್ನೇ ಎತ್ತುತ್ತಿರಲಿಲ್ಲ. ಅದು ನನ್ನಲ್ಲಿ ಒಂದು ವಿಶ್ವಾಸ ಹುಟ್ಟಿಸಲಿರಬೇಕು. ಇದೂ ಅಲ್ಲದೆ ನನ್ನ ಬಳಿ ಹಾಗೆ ಮಾತಾಡಲು ಅವನು ಹಿಂಜರಿಯಲು ಕಾರಣವೂ ಇತ್ತು. ಯಮುನಾ, ಲಲಿತ ಇಬ್ಬರ ವಿಷಯವಾಗಿ ನನಗಿದ್ದ ಅತಿಗೌರವ ಅವನಿಗೆ ಗೊತ್ತಿತ್ತು. ಸಮಯ ಸಿಕ್ಕಿದಾಗಲೆಲ್ಲಾ ನಾನೇ ಅವನಿಗೆ ಅವರ ವಿಷಯ ಹೇಳುತ್ತಿದ್ದೆ. ಅದೇನೋ ಕಾಣೆ. ಅವನ ಬಳಿ ಯಾವುದನ್ನೂ ಮುಚ್ಚಲು ನನಗೆ ಮನಸ್ಸಿರಲಿಲ್ಲ. ನನ್ನ ಮನಸ್ಸಿನ ಎಲ್ಲಾ ಭಾವನೆಗಳನ್ನು ಅವನಲ್ಲಿ ಬಿಚ್ಚು ಮಾತಿನಿಂದ ಹೇಳಿಬಿಡುತ್ತಿದ್ದೆ. ಗುಟ್ಟೆನ್ನುವುದೇ ನನ್ನ ಬಳಿ ಉಳಿದಿರಲಿಲ್ಲ. ಅವನು ಎಲ್ಲವನ್ನು ಕೇಳುತ್ತಿದ್ದ. ಆದರೆ ತನ್ನ ಒಳಭಾವನೆಗಳೊಂದನ್ನೂ

ನನಗೆ ತಿಳಿಸುತ್ತಿರಲಿಲ್ಲ. ನನಗೆ ಆಗ ಅದು ತಿಳಿಯದಿದ್ದರೂ ಅನಂತರ ತಿಳಿಯುತ್ತಿತ್ತು. ಅವನೊಂದಿಗೆ ಎಲ್ಲವನ್ನೂ ಹೇಳಿಯಾದ ಮೇಲೆ, ಮಾತುಕತೆ ಮುಗಿಸಿ ಮನೆಗೆ ಬಂದಮೇಲೆ ಯೋಚಿಸುತ್ತಿದ್ದೆ. ನಾನೆಲ್ಲ ಗುಟ್ಟನ್ನು ಅವನಿಗೆ ಬಿಟ್ಟುಕೊಟ್ಟೆ. ಆದರೆ ಅವನು ನನಗೆ ಏನನ್ನೂ ಹೇಳಲೇ ಇಲ್ಲವಲ್ಲ. ನಾನು ಅವನಲ್ಲಿ ಇಷ್ಟೊಂದು ನಂಬುಗೆ, ವಿಶ್ವಾಸವನ್ನಿಟ್ಟರೂ ಅವನು ಮಾತ್ರ ನನ್ನಲ್ಲಿ ವಿಶ್ವಾಸವಿಟ್ಟಿಲ್ಲವಲ್ಲ, ಎಂದು ಮನಸ್ಸು ಕೊಂಚ ಉರಿದೇಳುತ್ತಿತ್ತು. ಒಂದು ಹೇಳಲಾರದ ನೋವಾಗುತ್ತಿತ್ತು. ನನ್ನ ದೌರ್ಬಲ್ಯವನ್ನು ನಾನೇ ನಿಂದಿಸಿಕೊಳ್ಳುತ್ತಿದ್ದೆ. ಇನ್ನೊಮ್ಮೆ ಅವನನ್ನು ಕಂಡಾಗ ನಾನೂ ಏನೂ ಹೇಳುವುದಿಲ್ಲವೆಂದು ನಿಶ್ಚಯ ಮಾಡಿಕೊಳ್ಳುತ್ತಿದ್ದೆ. ಆದರೆ ಈ ನಿಶ್ಚಯ ಅವನನ್ನು ಕಂಡೊಡನೆಯೇ ಕರಗಿ ಹೋಗುತ್ತಿತ್ತು. ಅವನೊಂದಿಗಿದ್ದಾಗ ಯಾವಬಗೆಯ ಆತಂಕವೂ ಇಲ್ಲದೆ ಸಂಕೋಚವೂ ತೋರದೆ ನನ್ನ ಮನಸ್ಸನ್ನು ಅವನಿಗೆ ತೋಡಿಕೊಳ್ಳುತ್ತಿದ್ದೆ. ಅವನು ಕೂಡ ಗಂಭೀರಮುಖದಿಂದ ಅನಂತಸಹನೆಯಿಂದ ನನ್ನ ಮಾತೆಲ್ಲವನ್ನು ಕೇಳುತ್ತಿದ್ದ. ಅವನು ನನ್ನ ಮಾತೆಲ್ಲವನ್ನೂ ನಂಬುತ್ತಿದ್ದನೆಂದೂ ನಾನು ನಂಬಿದ್ದೆ:

ಆಗ ನಾನು ಅವನಿಗೆ ಹೇಳಿದುದೆಲ್ಲವನ್ನೂ ನೆನಪಿಕೊಂಡರೆ ಈಗ ನನಗೇ ನಗು ಬರುತ್ತದೆ. ನಾನು ಅಷ್ಟೊ ತಿಳಿಯದವನಾಗಿದ್ದೆನೇ ಎನಿಸುತ್ತದೆ. ನನ್ನ ದೃಷ್ಟಿಯಲ್ಲಿ ಆಗ ನಾನೊಬ್ಬ ಹುತಾತ್ಮ. ಜತೆಗೆ ಕ್ರಾಂತಿಪುರುಷ. ನಾನು ವ್ಯಕ್ತಿಸ್ವಾತಂತ್ರ್ಯವನ್ನು ಕಾಪಾಡಿಕೊಳ್ಳಲು ಯಾವುದನ್ನು ಬೇಕಾದರೂ ತ್ಯಾಗಮಾಡಬಲ್ಲೆ. ಎಂತೆಂತಹುವನ್ನೋ ತ್ಯಾಗಮಾಡಿಬಿಟ್ಟದೇನೆಂದು ನನ್ನ ಭಾವನೆ. ಆದರೆ ಹಾಳು ಸಮಾಜ ನನ್ನ ಹಾದಿಯಲ್ಲಿ ಅಡ್ಡನಿಂತಿದೆ. ಅದರ ಪ್ರತಿನಿಧಿಗಳಾಗಿ ನನ್ನ ತಾಯಿತಂದೆ ಮಗ್ಗುಲಮುಳ್ಳಾಗಿದ್ದಾರೆ. ನನ್ನನ್ನು ಕಂಡರೆ ಅವರಿಗಾಗುವುದಿಲ್ಲ. ನಾನು ಯಾವುದನ್ನು ಮಾಡಿದರೂ ಅದರಲ್ಲಿ ತಪ್ಪು ಕಂಡುಹಿಡಿಯುವುದೇ ಅವರ ಕೆಲಸ. ನಾನು ಹಿಡಿದ ಕೆಲಸವೊಂದೂ ಅವರಿಗೆ ಒಪ್ಪಿಗೆ ಇಲ್ಲ. ನಾನು ಮಾಡುವುದು ಯಾವುದೂ ಅವರಿಗೆ ಒಗ್ಗುವುದಿಲ್ಲ. ಸಂಪ್ರದಾಯದಲ್ಲಿ ಕಟ್ಟುಬಿದ್ದ ಅವರಿಗೆ ನನ್ನಮೇಲೆ ಕೊಂಚವಾದರೂ ವಾತ್ಸಲ್ಯವೂ ಇಲ್ಲ,

ಮಮತೆಯೂ ಇಲ್ಲ. ನನ್ನ ಸುಖ ಅವರಿಗೆ ಬೇಕೇ ಇಲ್ಲ. ಅವರಿಗೆ ತಮ್ಮ ಮಾತೇ ಹೆಚ್ಚು ಹೊರತು ನನ್ನ ಇಚ್ಛೆಯಲ್ಲ. ಅವರೇ ನನ್ನ ಮತ್ತು ಯಮುನೆಯ ಜತೆ ಕೂಡದೆಂದವರು. ನಾನು ಅವಳೊಡನೆ ಮಾತನಾಡಿದರೆ ಅವರ ಗಂಟೇನು ಹೋಗುತ್ತಿತ್ತೊ ಕಾಣೆ. ಗೊತ್ತಿಲ್ಲವೇ ? ನನ್ನನ್ನು ಕಂಡರಾಗದು ಅಷ್ಟೇ ! ಅಂತೂ ಈ ಬಗೆಯ ವಾದದಿಂದ ನಾನು ಅವನಿಗೆ ನಮ್ಮ ತಂದೆತಾಯಿ ಕಿರಾತ ಕಿರಾತಕಿಯರೆಂದು ಹೇಳಿದೆ. ದಿನದಿನವೂ ನನ್ನ ದುಃಖ ತೋಡಿಕೊಳ್ಳುತ್ತಿದ್ದೆ. ಒಂದೊಂದುದಿನ ಏನೂ ಇಲ್ಲದಿದ್ದರೂ ನಾನೇ ಏನಾದರೂ ಯೋಚಿಸಿಕೊಳ್ಳುತ್ತಲೂ ಇದ್ದೆ. ಅವನು ಅದೆಲ್ಲವನ್ನೂ ಕೇಳುತ್ತಿದ್ದಂತೆ ಅವನ ಮುಖವನ್ನೇ ದಿಟ್ಟಿಸುತ್ತಿದ್ದೆ. ಅವನು ಬಹಳ ಚತುರ. ಕು ಈ ವಿಷಯದಲ್ಲಿ. ಮುಖದಲ್ಲಿ ಯಾವ ಭಾವನೆಯನ್ನೂ ಅವನು ತೋರಿಸುತ್ತಲೇ ಇರಲಿಲ್ಲ. ನಾನು ಹೇಳಿದುದನ್ನು ಕೇಳುತ್ತಿದ್ದನೇ ಹೊರತು ನನ್ನ ಮಾತಿನಮೇಲೆ ಯಾವ ಮಾತನ್ನೂ ಆಡುತ್ತಿರಲಿಲ್ಲ. ನನ್ನ ಮಾತಿನಲ್ಲಿ ಅವನಿಗೆ ನಂಬಿಕೆಯಿದೆಯೋ ಇಲ್ಲವೇ ಎಂಬುದು ನನಗೆ ತಿಳಿಯುವುದು ಕಷ್ಟವಾಯಿತು. ಶತಪ್ರಯತ್ನ ಮಾಡಿದರೂ ಅವನು ಇವುಗಳ ವಿಷಯ ಬಾಯನ್ನೇ ಬಿಡುತ್ತಿರಲ್ಲಿಲ್ಲ. ಹೆಚ್ಚುಮಾತಿನ ಮನುಷ್ಯನಲ್ಲದಿದ್ದರೂ ಮಾತೇ ಇಲ್ಲದವನಲ್ಲ. ಆದರೆ ಈ ವಿಚಾರ ಮಾತ್ರ ಮಾತೇ ಸೊನ್ನೆ. ನಾನು ಮಾತ್ರ ಹೇಳುವುದನ್ನಂತೂ ಬಿಡಲಿಲ್ಲ. ನನಗೆ ಮಾತನಾಡಲು ಬೇರೆ ವಿಷಯವೂ ಇರಲಿಲ್ಲ. ಅವನ ವಿಷಯ ಮಾತನಾಡಬೇಕು. ನನ್ನ ವಿಷಯ ಮಾತನಾಡಬೇಕು. ಇಲ್ಲವೇ ಯಮುನೆಯ ವಿಷಯ ಹೇಳಬೇಕು. ಇದರಿಂದ ಹೆಚ್ಚಿಗೆ ನನ್ನ ವಿಷಯವನ್ನೇ ಹೇಳಿಕೊಳ್ಳುತ್ತಿದ್ದೆ.

ನಮ್ಮಿಬ್ಬರ ಸ್ನೇಹ ಬೆಳೆಯಬಂತು. ಅವನು ನನ್ನಲ್ಲಿ ಗೆಳೆತನ ಬೆಳೆಸುವ ಮೊದಲು ಬಹಳ ಯೋಚನೆ ಮಾಡಿದ. ಅವನ ಜಂಭ, ಹೆಡಸು ಅವನನ್ನು ಎಲ್ಲರಿಂದಲೂ ದೂರವಾಗಿಟ್ಟಿತ್ತು. ಯಾರಾದರೂ ಗೆಳೆತನ ಸಿಕ್ಕೀತೇ ಎಂದು ಅವನ ಮನಸ್ಸು ಕೂಡ ಹಾತೊರೆಯುತ್ತಿತ್ತು. ಆದರೆ ಸಹಜವಾಗಿಯೇ ಬಂದ ಜಂಭದಿಂದ ಯಾರೊಂದಿಗೂ ತಾನಾಗಿಯೇ ಪರಿಚಯ ಮಾಡಿಕೊಳ್ಳಲು ಇಷ್ಟವಿರಲಿಲ್ಲ. ಸಾಮಾನ್ಯ ವಿದ್ಯಾರ್ಥಿಗಳೊಂದಿಗೆ ಸ್ನೇಹ ಬೆಳೆಸುವುದು ಅಪಮಾನ, ನಾಚಿಗೆಗೇಡು. ತನ್ನ ಗೌರವಕ್ಕೇ

ಒಂದು ಕುಂದು. ಎಲ್ಲರಿಗಿಂತಲೂ ತಾನು ಎಷ್ಟಿದ್ದರೂ ಮೇಲು. ಆದು ದರಿಂದ ಎಲ್ಲರೂ ತನಗೆ ಗೌರವ ಕೊಡಬೇಕು. ತಾನು ಸ್ನೇಹ ಬೆಳೆಸ ಬೇಕಾದರೆ ಒಂದಲ್ಲ ಒಂದು ಬಗೆಯಲ್ಲಿ ತನ್ನ ಸಮಾನರಾದವರೊಂದಿಗೆ ಬೆಳೆಸಬೇಕು. ಸಮಾನರಾದವರು ಸಿಗುವುದಿಲ್ಲವಾದರೆ ಹೆಚ್ಚು ಕಡಿಮೆ ಹತ್ತಿರ ಹತ್ತಿರ ಸಮಾನರಾದವರು ಸಿಕ್ಕಿದರೂ ಸರಿ. ಅಂತಹವರನ್ನು ತಾನಾಗಿಯೇ ಹುಡುಕಿಕೊಂಡು ಹೋಗುವುದು ಆಗದ ಕೆಲಸ. ಅವರಾ ಗಿಯೇ ತನ್ನ ಬಳಿ ಬರಬೇಕು. ತಾನು ಎಷ್ಟಿದ್ದರೂ ಅಯಸ್ಕಾಂತದಂತೆ. ಕಬ್ಬಿಣದ ಚೂರುಗಳು ತನ್ನ ಸೆಳತಕ್ಕೆ ಸಿಕ್ಕಿ ತಾನಾಗಿಯೇ ಬರುತ್ತವೆನ್ನುವ ಆತ್ಮಭರವಸೆ! ಆದರೆ ಹೃದಯದಲ್ಲಿ ಮಾತ್ರ ತೆರವು, ಗೆಳೆತನದ ಹಂಬಲ! ಎಲ್ಲರ ಮೆಚ್ಚುಗೆ ಪಡೆಯುವ ಆಸೆಯೇನೋ ಇತ್ತು. ಆ ಆಸೆ ತೃಪ್ತವಾ ಗುತ್ತಿತ್ತು. ಆದರೆ ಅದರ ಜತೆಗೇ ಸ್ನೇಹದ ಬಯಕೆ. ಈ ಸ್ನೇಹದ ಬಯಕೆಗೂ ಅವನ ಸಹಜವಾದ ಹೆಡಸಿಗೂ ತಿಕ್ಕಾಟ ಬಹಳ ಬಿರುಸಾಗಿತ್ತು. ಇದುವರೆಗೂ ಗರ್ವದ್ದೇ ಮೇಲುಗೈಯಾಗಿತ್ತು. ಆದರೆ ಸಹಜವಾದ ಸ್ನೇಹದ ಆಸೆ ಕೊನೆಗೂ ಬಲವಾಗಿ ಅವನನ್ನು ನನ್ನ ಗೆಳೆತನಕ್ಕೆ ನೂಕಿತ್ತು. ನನ್ನ ಗೆಳೆತನವಲ್ಲಿ ಅವನಿಗೆ ಉಳಿದ ಆಸೆಗಳಿಗೂ ಇಂಬು ಸಿಕ್ಕಂತಾಗಿತ್ತು. ಹೊಗಳಿಕೆಗೆ ಬೇಕೆಂದರೆ ನನ್ನಿಂದ ಸಿಗುತಿದ್ದಷ್ಟು ಹೊಗಳಿಕೆ ಅವನಿಗೆ ಮತ್ತಾ ರಿಂದಲೂ ಸಿಗುತ್ತಿರಲಿಲ್ಲ. ನಾನಂತೂ ಅವನ ಪೂಜಾರಿಯಾಗಿಬಿಟ್ಟಿದ್ದೆ. ಇನ್ನು ಯಮುನಾ, ಲಲಿತ ಇವರ ಹೊಗಳಿಕೆಯು ಕೂಡ ಅವನಿಗೆ ನನ್ನ ಮೂಲಕ ಸಲ್ಲುತ್ತಿತ್ತು. ಮೇಲೆ ತೋರದಿದ್ದರೂ ಅವನಿಗೆ ಆ ಹೊಗಳಿಕೆ ಬೇಕಾಗಿತ್ತೆಂದು ನನಗೆ ಗೊತ್ತು. ಅವನ ಜಂಭ, ಅಹಂಕಾರದ ದರ್ಪವನ್ನು ನನ್ನ ಮೇಲೆ ತೋರಿಸಲೂ ಸಾಧ್ಯವಾಗುತ್ತಿತ್ತು. ಅವನು ಮಾಡಿದುದು ಯಾವುದೂ ನನ್ನ ದೃಷ್ಟಿಯಲ್ಲಿ ತಪ್ಪಲ್ಲ. ಎಂದಮೇಲೆ ನಾನು ಅವನ ಆರಾಧಕನಾದಂತೆಯೇ! ಅವನು ನನ್ನ ನಡವಳಿಕೆಯನ್ನೇನಾ ದರೂ ವಿರೋಧಿಸಿದರೆ ನಾನು ಮಾತಿಲ್ಲದೆ ಅದನ್ನೊಪ್ಪಿಕೊಂಡುಬಿಡುತ್ತಿದ್ದೆ. ನನ್ನನ್ನು ಕ್ಷಮಿಸು, ನನ್ನದು ತಪ್ಪಾಯಿತೆಂದೂ ಕೇಳಿಕೊಳ್ಳುತ್ತಿದ್ದೆ. ಇವೆಲ್ಲವರ ಜತೆಗೆ ನಾನು ಒಳ್ಳೆಯ ವಿದ್ಯಾರ್ಥಿಯೂ ಹೌದು. ಅವನಿಗೆ ಓದು ವುದರಲ್ಲಿ ತುಂಬಾ ಆಸಕ್ತಿಯಿತ್ತು. ಹೇಗಾದರೂ ತಾನು ಮೊದಲನೆಯ

ದರ್ಜೆಯ ಸ್ಥಾನವನ್ನು ದೊರಕಿಸಿಕೊಳ್ಳುವ ಆಸೆ ಅವನದು. ನಾನು ಒಳ್ಳೆಯ ವಿದ್ಯಾರ್ಥಿಯಾದುದರಿಂದ ಮನಸ್ಸಿನೊಳಗೇ ಅವನಿಗೆ ನನ್ನಲ್ಲಿ ಗೌರವ ಇದ್ದಿರಬೇಕು. ಈ ಗೌರವವಷ್ಟೇ ಅಲ್ಲ. ಒಂದುರೀತಿಯ ಅಸೂಯೆ ಕೂಡ ಇತ್ತು. ನನ್ನಿಂದ ಉಪಯೋಗ ಕೂಡ ಪಡೆಯಬಹುದೆಂದು ಅವನಿಗೆ ತೋರಿತ್ತು. ಇದರಿಂದಲೇ ನನ್ನ ಸ್ನೇಹಕ್ಕೆ ಅವನು ಮಾರುತ್ತರ ಕೊಟ್ಟಿದ್ದು. ಆದರೆ ನಮ್ಮಿಬ್ಬರ ಗೆಳೆತನ ಮೊಳೆತಾಗ ಅವನ ಮನಸ್ಸಿನಲ್ಲಿ ತುಮುಲ ಯುದ್ಧವಾಗಿತ್ತು. ಸಹಜವಾಗಿಯೇ ಬಂದ ಅಹಂಕಾರಕ್ಕೂ ಸಹಜವಾಗಿಯೇ ಸೆಟೆದುನಿಂತ ಗೆಳೆತನದ ಹಂಬಲಕ್ಕೂ ಘರ್ಷಣೆಯಾಗಿತ್ತು. ಆದರಿಂದಲೇ ಒಂದೊಂದು ಬಾರಿ ನನ್ನ ಮಾತಿಗೆ ಬರಿಯ ಒಂದು ತಾತ್ಸಾರದ ನೋಟವೋ, ತಿರಸ್ಕಾರದ ನಗೆಯೋ, ಹುಬ್ಬಿನ ಚಿಮ್ಮೋ ಸಿಗುತ್ತಿದ್ದುದು. ಆದರೆ ಅದು' ಬಹಳಕಾಲ ಹಾಗಿರಲಿಲ್ಲ. ಕೆಲವೇ ದಿನ ಮಾತ್ರ. ದಿನ ಕಳೆದಂತೆ ಈ ಬಗೆ ಕಡಮೆಯಾಗಿ ಸಲಿಗೆ ಬೆಳೆಯಿತು. ಸಲಿಗೆ ಬೆಳೆದಂತೆ ಚಳಬಿಟ್ಟು ಮಾತನಾಡುತ್ತಿದ್ದ. ತನ್ನ ವಿಷಯವಾಗಿ, ತನ್ನ ಮನೆಯವರ ವಿಷಯವಾಗಿ ಹೇಳಿಕೊಳ್ಳುತ್ತಿದ್ದ. ತನ್ನ ಮನೆಗೂ ನನ್ನನ್ನು ಕರೆದು ಕೊಂಡು ಹೋಗುತ್ತಿದ್ದ. ಅಂತೂ ಆ ವರ್ಷ ಕಳೆಯುವುದರಲ್ಲಿ ನಾವಿಬ್ಬರೂ ತೀರ ಹತ್ತಿರದ ಗೆಳೆಯರಾದೆವು.

ಯಮುನಾ ಹಾಸನದಿಂದ ಮತ್ತೆ ಊರಿಗೆ ಹಿಂತಿರುಗಿದಳು. ಎಂದಿನಂತೆಯೇ ಸಂಜೆ ಆಟ ಮುಗಿಸಿದ ಕೂಡಲೆ ಅವಳೊಂದಿಗೆ ಹರಟೆ ಹೊಡೆಯಲು ಮನೆಗೆ ಬರುತ್ತಿದ್ದೆ. ನನ್ನ ಮನಸ್ಸಿನಲ್ಲಿ ಯಾವಾಗಲೂ ಶ್ಯಾಮನ ಯೋಚನೆಯೇ ಇರುತ್ತಿತ್ತು. ಅದರಿಂದ ಸುಮ್ಮನೆ ಅವನ ವಿಷಯವನ್ನೇ ಅವಳಿಗೆ ಹೇಳುತ್ತಿದ್ದೆ. ಅವಳೂ ಆಸಕ್ತಿಯಿಂದ, ಸಂತೋಷದಿಂದಲೇ ಕೇಳುತ್ತಿದ್ದಳು. ಅವನ ವಿಷಯ ಎಷ್ಟು ಮಾತನಾಡಿದರೂ ನನಗೆ ತೃಪ್ತಿಯಿಲ್ಲ. ಅವಳೂ ಕೇಳುತ್ತಿದ್ದಳು. ಒಂದೊಂದು ದಿನ ನಗುತ್ತಾ ನನ್ನ ಮಾತನ್ನು ಅರ್ಧದಲ್ಲೇ ಕತ್ತರಿಸುತ್ತಿದ್ದಳು. ನಿನಗೆ ಮಾತಾಡಲು ಬೇರೆ ವಿಷಯವೇ ಇಲ್ಲವೇನೋ ಎಂದು ಹಾಸ್ಯಮಾಡತ್ತಿದ್ದಳು. ನಾನೂ ನಕ್ಕು ಕೊಂಚಕಾಲ ಮತ್ತೇನಾದರೂ ಮಾತನಾಡಲು ಯತ್ನಿಸುತ್ತಿದ್ದೆ.

ಆದರೆ ಏನುಮಾಡಿದರೂ ಕೊನೆಗೆ ಯೋಚನೆ, ವಿಚಾರಸರಣಿಯೆಲ್ಲ ಅವನ ಕಡೆಗೇ ಹರಿದು ಹೋಗುತ್ತಿತ್ತು. ಸರಿ, ಮತ್ತೆ ಅವನ ಗುಣಗಾನ ಆರಂಭ. ಅವಳೂ ನಗುತ್ತಾ ಕೇಳುತ್ತಿದ್ದಳು. ಮನಸ್ಸಿನಲ್ಲಿ ಏನೆಂದುಕೊಳ್ಳುತ್ತಿದ್ದಳೋ ಏನೋ ನನಗಂತೂ ತಿಳಿದಿರಲಿಲ್ಲ. ತಿಳಿಯುವ ವಿಚಾರ ಕೂಡ ಇರಲಿಲ್ಲ.

## ೫

ನಮ್ಮಿಬ್ಬರ ಪರಿಚಯವಾದ ಕೆಲವು ದಿನಗಳು ನನಗೆ ಬೇರೆ ಯಾವ ವಿಷಯಕ್ಕೂ ಆಸಕ್ತಿಯೇ ಇರಲಿಲ್ಲ. ಯಾವಾಗಲೂ ಅವನ ಜೊತೆಯಲ್ಲಿ ಕಾಲ ಕಳೆಯುವುದು. ಅವನೊಡನೆ ಓಡಾಟ. ಅಲೆಯುವುದು. ಅವನ ಬಾಲವಾಗಿ ಸುತ್ತುವುದು. ಅವನ ವಿಷಯವಾಗಿ ಮಾತಾಡುವುದು. ಇದರಲ್ಲೇ ನನಗೊಂದು ಹೆಮ್ಮೆ. ಹುಡುಗರು ನನ್ನ ವಿಚಾರವಾಗಿ ಏನೆಂದು ಕೊಳ್ಳುವರೆಂಬುದರ ಪರಿವೆಯೇ ನನಗಿರಲಿಲ್ಲ. ಈ ಹೊಸಗೆಳೆತನದ ಕಾವಿನಲ್ಲಿ ಹಳೆಯ ಸ್ನೇಹಗಳೆಲ್ಲ ಕರಗಿದವು. ನನಗೆ ಬಹಳ ಆಪ್ತರಾಗಿದ್ದ ಗೆಳೆಯರು ಎದುರಿಗೆ ಸಿಕ್ಕಿದರೆ ಅವರನ್ನು ಮಾತಾಡಿಸುವಷ್ಟುಕೂಡ ನನಗೆ ತಾಳ್ಮೆಯಿಲ್ಲ. ತುಟಿಯನ್ನು ಕಂಡೂಕಾಣದಂತೆ ಅಲುಗಿಸಿ ಹೆಮ್ಮೆಯ ನಗೆಯೊಂದನ್ನು ಅವರಮೇಲೆಸೆಯುತ್ತಿದ್ದೆ. ಇದನ್ನು ನಾನು ಶ್ಯಾಮನಿಂದ ಕಲಿತುದು. ಹೀಗೆ ನಾನು ಗರ್ವಪಡಲಾರಂಭಿಸಲು, ನನ್ನ ಗೆಳೆಯರೆಲ್ಲ ನನ್ನಿಂದ ದೂರವಾದರು. ಟೆನ್ನಿಸ್ ಆಟದಲ್ಲಿ ಕೂಡ ಮೊದಲಿನ ಆಸಕ್ತಿ ಯಿರಲಿಲ್ಲ. ಈಗ ನನ್ನ ಜೀವನದ ಕೇಂದ್ರ ನನ್ನ ಹೊಸ ಗೆಳೆಯ ಶ್ಯಾಮ್! ಯಮುನಾ, ಲಲಿತ ಇಬ್ಬರಿಗೂ ಅಸೂಯೆ ಬರುವಷ್ಟುಮಟ್ಟಿಗೆ ಅವನಲ್ಲಿ ನನ್ನ ಪ್ರೀತಿ ನೆಟ್ಟಿತ್ತು! ಆದರೆ ಅವನು ನನ್ನಲ್ಲಿ ಅಷ್ಟುಪ್ರೀತಿ ಇಟ್ಟಿದ್ದನೋ ಇಲ್ಲವೊ ನನಗಾಗ ತಿಳಿಯದು. ಅವನೇನೆಂದರೂ ನಾನು ಹೂಂಗುಟ್ಟುತ್ತಿದ್ದೆ. ನನ್ನ ವಿಷಯವಾಗಿ ಅವನಿಗೆ ಯಾವ ಭಾವನೆಯಿದೆಯೆಂದು ನಾನು ಯೋಚಿಸುತ್ತಲೇ ಇರಲಿಲ್ಲ. ಈಗ ಅಂದಿನ ದಿನಗಳನ್ನು ನೆನೆದರೆ, ಆಗ ನನ್ನಸ್ಥಿತಿ ಅವನ ಊಳಿಗದವನದಾಗಿತ್ತೆನಿಸುತ್ತದೆ. ತನಗೆ ಯಾವ ಕೆಲಸ ಬೇಕಾದರೂ ಅವನು ನನ್ನಿಂದ ಮಾಡಿಸುತ್ತಿದ್ದ. ನಾನು ಕೊಂಚವಾದರೂ ಹಿಂದೇಟು ಹೊಡೆಯದೆ ಎಲ್ಲ ಕಾರ್ಯವನ್ನೂ ಮಾಡುತ್ತಿದ್ದೆ. ಅವನು ನನ್ನನ್ನು ತನ್ನ ಎಂದಿನ ಜಂಭದಿಂದ, ಹೆಡಸಿನಿಂದಲೇ ನೋಡುತ್ತಿದ್ದ. ಆದರೆ ನನಗೆ ಆಗ ಅದು ತಿಳಿಯುತ್ತಿರಲಿಲ್ಲ. ತಿಳಿಯುವುದೂ ಬೇಕಾಗಿರಲಿಲ್ಲ.

ಈ ಹೆಡಸು ಅವನು ಎಲ್ಲರಮೇಲೂ ತೋರುತ್ತಿದ್ದ. ಒಂದು ದಿನ ಅವನು ನನ್ನನ್ನು ತಮ್ಮ ಮನೆಗೆ ಕರೆದಿದ್ದ. ಅವರ ಮನೆಯಲ್ಲಿ ಯಾವುದೋ

ಹಬ್ಬ. ಊಟಕ್ಕೆ ನನ್ನನ್ನು ಕರೆದಿದ್ದ. ನಾನು ಹೋಗಿ ಕೋಣೆಯಲ್ಲಿ ಕುಳಿತಿದ್ದೆ. ಅವರ ಮನೆಯಲ್ಲಿದ್ದವರು ತಾಯಿ, ಶ್ಯಾಮನ ಹಿರಿಯಣ್ಣ ಸೀತಾರಾಮು, ತಂಗಿ ಲಕ್ಷ್ಮಿ ಇಷ್ಟು ಜನ ಮಾತ್ರ. ಶ್ಯಾಮನ ತಂದೆಯುವರು ಹಾಸನ ಜಿಲ್ಲೆಯವರು. ದೊಡ್ಡ ಜಮೀನುದಾರರು. ಬೇಕಾದಷ್ಟು ವರಮಾನವಿತ್ತು. ಹಲವಾರು ತೆಂಗಿನತೋಟಗಳಿತ್ತು. ತುಂಬಾ ಜಮೀನಿತ್ತು. ಸುಖವಾಗಿ ಬದುಕಿ ಬಾಳಿದ ಜನ. ಸುತ್ತಲೆಲ್ಲ ಅವರ ಪ್ರಭಾವ ಕೂಡ ಜೋರಾಗಿಯೇ ಇತ್ತು. ಪ್ರತಿಷ್ಠಾವಂತರು. ಎಲ್ಲರಿಂದಲೂ ಗೌರವ ಪಡೆಯುತ್ತಿದ್ದವರು. ಅವರ ಎದುರಾಳಿ ಕಾಂಗ್ರೆಸ್ಸಿನವನೇ ಆದರೂ ನಾಲ್ಕು ಬಾರಿ ಕೂಡ ಪ್ರಜಾಪ್ರತಿನಿಧಿಸಭೆಗೆ ಚುನಾಯಿತರಾದವರು. ಅವರಿಗೆ ಇದ್ದವರೇ ಮೂರುಮಕ್ಕಳು. ಹಿರಿಯಮಗ ಸೀತಾರಾಮು, ಎರಡನೆಯವನು ಶ್ಯಾಮ್, ಕಿರಿಯವಳು ಲಕ್ಷ್ಮಿ. ಅವರು ಹಳ್ಳಿಯಲ್ಲಿಯೇ ಇದ್ದು ಕೊಂಡು ಗಂಡುಮಕ್ಕಳಿಬ್ಬರನ್ನು ವಿದ್ಯಾಭ್ಯಾಸಕ್ಕೆ ಕಳುಹಿಸಿದರು. ಆದರೆ ಇದು ಅಷ್ಟು ಸರಿಯಾಗಿ ತೋರಲಿಲ್ಲ. ಕಾಲಕಾಲಕ್ಕೆ ಎಣ್ಣೆನೀರು, ಅನ್ನ ಕಾಣದೆ ಹುಡುಗರು ಕಂಗಾಲಾಗುತ್ತಿರುವರೆಂದು ಗಂಡಹೆಂಡರಿಬ್ಬರಿಗೂ ಅನ್ನಿಸಿತ್ತು. ಖರ್ಚೇನೂ ಕಡಿಮೆಯಿರಲಿಲ್ಲ. ಈ ಖರ್ಚಿನಲ್ಲೇ ಮೈಸೂರಿನಲ್ಲಿ ಸಂಸಾರ ಹೂಡಬಹುದೆಂದು ಅವರಿಗೆ ತೋರಿತು. ಅದೇವೇಳೆಗೆ ಸರಿಯಾಗಿ ಶ್ಯಾಮನ ತಾಯಿ-ಗೌರಮ್ಮನವರು ಮೈಸೂರಿಗೆ ಬರಬೇಕಾ ಯಿತು. ಯಾರೊ ನಂಟರು ಸತ್ತುಹೋದುದರಿಂದ ಮೈಸೂರಿನಲ್ಲೇ ಕೆಲವು ದಿನ ಇರಬೇಕಾಯಿತು. ಹುಡುಗರ ಕಷ್ಟನೋಡಿ ಗೌರಮ್ಮನವರು ತಾವು ಮೈಸೂರಿನಲ್ಲೇ ಬೇರೆ ಮನೆಮಾಡಿ ಸಂಸಾರ ಹೂಡುವುದೆಂದು ತೀರ್ಮಾನಿಸಿದರು. ಶ್ಯಾಮನ ತಂದೆ ಊರಲ್ಲಿ ಇರುವುದು, ಆಗಾಗ ಮೈಸೂರಿಗೆ ಬರುವುದು ಮಾಡುತ್ತಿದ್ದರು.

ಸೀತಾರಾಮುವನ್ನು ಮೊದಲಬಾರಿ ನೋಡಿದುದು ಆ ದಿನವೇ. ಮನುಷ್ಯ ಕೊಂಚ ಉದ್ದವಾಗಿಯೇ ಇದ್ದ. ಮುಖದಲ್ಲಿ ಯಾವುದೊಂದು ಬುದ್ಧಿವಂತಿಕೆಯ ಚಿಹ್ನೆಯೂ ಕಾಣುತ್ತಿರಲಿಲ್ಲ. ಶ್ಯಾಮ್ ನೋಡಲು ಎಷ್ಟು ಚುರುಕಾಗಿ ಕಾಣುತ್ತಿದ್ದನೋ ಸೀತಾರಾಮು ಅಷ್ಟೂ ಮೊದ್ದಾಗಿ ಕಾಣುತ್ತಿದ್ದ. ಶ್ಯಾಮನಿಗಿಂತ ಐದಾರು ವರ್ಷ ದೊಡ್ಡವನು. ಇನ್ನೂ

ಚಿಕ್ಕವನೇ ಆದರೂ ತಲೆಕೂದಲೆಲ್ಲ ಉದುರಿ ಹೋಗಿತ್ತು. ಬಟ್ಟೆತಲೆಗೊಂದು ಕಪ್ಪುಟೋಪಿ ಸದಾ ಹಾಕುವ ಅಭ್ಯಾಸ. ಯಾಕೆಂದರೆ ಆ ಟೋಪಿಯ ಅಂಚಿನ ಗುರುತಿನಿಂದ ಹಣೆಯಮೇಲೆ ಬಿಳಿ ಗುರುತು ಕಾಣುತ್ತಿತ್ತು. ಎರಡು ಬಾರಿ ಬಿ.ಎಲ್‌ಗೆ ಕುಳಿತು ಮೂರನೆಯ ಬಾರಿ ಮುಗಿಸಿದ್ದ. ಈಗ ಮೈಸೂರಿಗೆ ಬಂದು ಲಾಯರ್ ಆಗಿರಲು ಪ್ರಯತ್ನಿಸುತ್ತಿದ್ದ. ಶ್ಯಾಮ್ ಇಂಟರ್‌ಮಿಾಡಿಯೆಟ್‌ಗೆ ಬರುವ ವೇಳೆಗೂ ಸೀತಾರಾಮು ಲಾಯರಾಗುವ ವೇಳೆಗೂ ಸರಿಹೋಗಿತ್ತು. ಇಬ್ಬರೂ ಮೊದಲು ಯಾವುದೋ ಒಂದು ಕೋಣೆಯನ್ನು ಬಾಡಿಗೆಗೆ ಮಾಡಿಕೊಂಡು ಹೋಟಲಿನಲ್ಲಿ ಊಟ ಮಾಡುತ್ತಿದ್ದರು. ಅದಾದ ಕೊಂಚ ದಿನಕ್ಕೇ ಗೌರಮ್ಮನವರು ಬಂದು, ಮನೆ ಮಾಡಿದ್ದರು.

ಸೀತಾರಾಮು ನೋಡಲು ಗಡುಸಾಗಿದ್ದರೂ ಸ್ವಭಾವ ಮಾತ್ರ ಬಹಳ ಮೃದು. ಮೃದು ಸ್ವಭಾವದ ಜನರು ಲಾಯರುಗಳಾದರೆ ಕಕ್ಷಿಗಾರರಿಗೆ ಕೈಲಾಸವೇ ಗತಿ! ಅದರಿಂದಲೇ ಇರಬೇಕು ಲಾಯರಿಕೆಯಲ್ಲಿ ಅಷ್ಟಾಗಿ ಹೆಸರು ಬರಲಿಲ್ಲ. ಅನುಭವವಿರಲಿಲ್ಲ. ಅವರೂ ಹಿರಿಯರಿಂದಾಗಲಿ, ಕಕ್ಷಿಗಾರರಿಂದಾಗಲಿ ಒಂದು ಬಾರಿಯಾದರೂ ಭೇಷ್ ಎನಿಸಿಕೊಂಡುದಿಲ್ಲ. ಆದರೆ ಮನುಷ್ಯ ಮಾತ್ರ ತನ್ನ ಕೆಲಸ ಬಿಡಲಿಲ್ಲ. ತಂದೆ ಕೂಡ ಇನ್ನೂ ಹೊಸದು, ಕೊಂಚ ಅನುಭವವಾದರೆ ಸರಿಹೋಗುತ್ತಾನೆಂದು ಅವನ ಖರ್ಚಿಗೆ ದುಡ್ಡು ಕಳಿಸುತ್ತಿದ್ದರು. ಇದರಿಂದ ಸೀತಾರಾಮುವಿಗೆ ಹಣದ ಕೊರತೆ ಕಾಣಲಿಲ್ಲ. ಕೆಲಸ ಕಲಿಯುವುದಾಗಲಿಲ್ಲ. ಕಕ್ಷಿಗಾರರೂ ಕಾಣುತ್ತಿರಲಿಲ್ಲ.

ಸೀತಾರಾಮುವಿನ ಈ ಕಾರ್ಯವಿಫಲತೆ, ಕೆಲಸಕ್ಕೆ ಬಾರದ ಬಗೆಯಿಂದ ಶ್ಯಾಮನಿಗೆ ಅವನ ಮೇಲೆ ತಾತ್ಸಾರ. ಶ್ಯಾಮ್ ತನ್ನ ಹಿರಿತನವನ್ನು ದರ್ಪವನ್ನು ಸೀತಾರಾಮುವಿನ ಮೇಲೂ ತೋರಿಸುತ್ತಿದ್ದ. ತನ್ನ ಅಣ್ಣನ ಬಗ್ಗೆ ಕೂಡ ಅವನು ತೋರಿಸುತ್ತಿದ್ದ ತಾತ್ಸಾರವನ್ನು ನಾನು ಆ ದಿನ ನೋಡಿದೆ. ಅದಾದಮೇಲೂ ಎಷ್ಟೋ ದಿನ ತಿರಸ್ಕಾರದಿಂದ ತನ್ನ ಅಣ್ಣನ ವಿಷಯವಾಗಿ ಅಂದುದನ್ನೂ ಕೇಳಿದ್ದೇನೆ. "ಕೆಲಸಕ್ಕೆ ಬಾರದವನು, ಮೂರ್ಖ, ಮಡ್ಡಿ" ಈ ಮಾತುಗಳು ಶ್ಯಾಮನ ಸಾಮಾನ್ಯ ಪದಗಳು

ಅಣ್ಣನ ವಿಷಯಕ್ಕೆ. ಆದರೆ ಸೀತಾರಾಮು ಇದನ್ನೆಲ್ಲಾ ಬಹಳ ತಾಳ್ಮೆ ಯಿಂದ ಸಹಿಸುತ್ತಿದ್ದ. ಒಮ್ಮೆಯೂದರೂ ತಮ್ಮನ ಉದ್ಧಟತನದ ಮೇಲೆ ಅವನು ತಿರುಗಿಬಿದ್ದುದು ನನಗೆ ತಿಳಿಯದು. ಆತನ ತಾಳ್ಮೆ ನಿಜವಾಗಿಯೂ ಅನಂತಸಹನೆಯೆಂದು ನನಗೆ ಈಗ ಅನಿಸುತ್ತದೆ. ಆತ ಈಗ ಎಲ್ಲಿರುವನೋ ನನಗೆ ಗೊತ್ತಿಲ್ಲ. ಆದರೂ ಅಂತಹ ತಾಳ್ಮೆಯ ವ್ಯಕ್ತಿಗಳು ಎಲ್ಲಿಯೂ ಪ್ರಭಾವಶಾಲಿಗಳಾಗಲಾರರೆಂದು ಖಂಡಿತ ಹೇಳಬಲ್ಲೆ.

ಆ ದಿನ ನಡೆದುದಿಷ್ಟು. ಶ್ಯಾಮ್ ಮನೆಗೆ ಬಂದವನೇ ತನ್ನ ಕೋಣೆಗೆ ಹೋದ.

" ಲಕ್ಷ್ಮೀ-ಲೇ ಲಕ್ಷ್ಮೀ "

ಲಕ್ಷ್ಮಿ ಅವನ ಕೂಗು ಕೇಳಿದೊಡನೆಯೇ ನಡುಗುತ್ತಾ ಓಡಿಬಂದಳು. ಲಕ್ಷ್ಮಿ ಬಹಳ ಸುಂದರವಾದವಳಲ್ಲದಿದ್ದರೂ ಲಕ್ಷಣವಾದ ಹುಡುಗಿ. ಇನ್ನೂ ಹತ್ತುಹನ್ನೊಂದು ವರ್ಷ. ಅಗಲವಾದ ಮುಖದಲ್ಲಿ ಅಗಲವಾದ ಅಚ್ಚರಿಯ ಬಿಚ್ಚುಗಣ್ಣುಗಳು. ಉದ್ದವಾದ ಕಣ್ಣೆವೆ. ನಸು ನೀಳವಾದ ಮೂಗು. ಒಪ್ಪುವಂತಹ ನತ್ತು. ಅಚ್ಚಬಿಳುಪಲ್ಲದಿದ್ದರೂ ಕಳೆದುಂಬಿದ ಮುಖ. ಒಳಗೆ ಕೆಲಸ ಮಾಡುತ್ತಿದ್ದುದರಿಂದ ಹಣೆಯಮೇಲೆ ಒಂದೆರಡು ಹನಿ ಬೆವರು. ನಾಲ್ಕು ತಲೆಗೂದಲು ಹಾರಾಡುತ್ತಿದ್ದುದು ಹಿಂದೆ ಸರಿಸಿಕೊಳ್ಳುವಾಗ ಬೆವರಿಗೆ ಅಂಟಿಕೊಂಡಿತ್ತು. ಮತ್ತೆ ನಾಲ್ಕು ಕುರುಳು ತೂರಾಡಿ ಕೆನ್ನೆಗಿಳಿದಿತ್ತು. ಹೆದರಿಕೆ ಅಣ್ಣನನ್ನು ಕಂಡರೆ, ತುಟಿ ತುಸು ನಡುಗುತ್ತಿತ್ತು ಜರತಾರಿ ಲಂಗ, ಹೊಸ ಕಾಲರಿನ ಕುಪ್ಪುಸದಲ್ಲಿ ನನ್ನ ಕಣ್ಣಿಗೆ ಬಹಳ ಸುಂದರವಾಗಿ ಕಾಣಿಸಿದಳು.

" ಏನಣ್ಣಾ ? " ಎಂದಳು ಹೊಸಲ ಬಳಿ ನಿಂತು.

" ಏನೇ ? ಯಾರು ಇಲ್ಲಿ ಈ ಕಸ ಹಾಕಿದ್ದು. ಈ ಮೇಜಿನ ಮೇಲೆ ಹಾಳೆಗಳಿದ್ದುವಲ್ಲ ಎಲ್ಲಿ ? "

" ಅಲ್ಲೇ ಬೀರುವಿನಲ್ಲಿದೆ. ಸೀತು ಇಲ್ಲಿ ಕೂತಿದ್ದ. ಯಾರೋ ಅವನ ಸ್ನೇಹಿತರು— "

"ನನ್ನ ಕೋಣೆಗೆ ಬರಬೇಡಾಂತ ಎಷ್ಟು ಹೇಳಿದರೂ ಅವನಿಗೆ ತಲೆಗೆ ಹತ್ತುವುದಿಲ್ಲ." ಎಂದು ಗೊಣಗಿದ ಶ್ಯಾಮ್.

ಲಕ್ಷ್ಮಿ ಒಳಕ್ಕೆ ಹೋದಳು. ಶ್ಯಾಮನಿನ್ನೂ ಮಹಾ ಕೋಪದಲ್ಲೇ ಬುಸುಗುಟ್ಟುತ್ತಿರುವಾಗಲೇ ಅವರಣ್ಣ ಸೀತಾರಾಮು ಮನೆಗೆ ಬಂದ. ಬಂದು ಕೋಣೆಯೊಳಕ್ಕೆ ಕಾಲಿಟ್ಟುದೇ ತಡ, ಶ್ಯಾಮ್ ಅವನ ಮೇಲೆ ಸಿಡಿಮದ್ದಿನಂತೆ ಹಾರಿದ. ನಾನು ಕಣ್ಣಾರ ಕಾಣದಿದ್ದರೆ, ಕಿವಿಯಾರ ಕೇಳದಿದ್ದರೆ, ತಮ್ಮ ಅಣ್ಣನ ಮೇಲೆ ಹೀಗೆ ಎರಗಿ ಬೀಳುವನೆಂದು ಕಲ್ಪಿಸಿಕೊಳ್ಳುತ್ತಲೂ ಇರಲಿಲ್ಲ. ಕೋಪದಲ್ಲಿ ಸಿಕ್ಕಿದಂತೆಲ್ಲಾ ಬೈದು, ಸೀತಾರಾಮುವಿನದು ಯಾವುದೋ ಬಟ್ಟೆಗಳು-ಅಗಸನಿಂದ ಬಂದ ಮಡಿಯಾದ ಬಟ್ಟೆಗಳು ಅಲ್ಲಿದ್ದವನ್ನು ಅಲ್ಲಿಂದ ಹೊರಕ್ಕೆಸೆದುಬಿಟ್ಟ. ಆ ದಿನ ಊಟಕ್ಕೆ ಕುಳಿತಾಗ ಕೂಡ ಅಣ್ಣನೊಂದಿಗೆ ಮಾತಿಲ್ಲ. ನನಗೆ ಅದು ಮರೆಯದಿರಲು ಕಾರಣ ಇದು. ಆ ದಿನದ ವಿಪರೀತವೆಂದರೆ ಊಟದಿಂದ ಯಾವ ಸಂತೋಷವೂ ಆಗಲಿಲ್ಲ. ಹೀಗೂ ಆಗುವುದೇ ಎನಿಸಿತು. ಆದರೂ ಶ್ಯಾಮನ ಬಗ್ಗೆ ನನಗೆ ಗೌರವ ತಗ್ಗಲಿಲ್ಲ. ಎಲ್ಲ ತಪ್ಪನ್ನು ಸೀತಾರಾಮುವಿನ ಮೇಲೆಯೇ ಹೊರಿಸಿ ಶ್ಯಾಮ್ ನನಗೆ ಹೇಳಿದುದನ್ನು ನಾನಂತೂ ಒಪ್ಪಿಕೊಂಡೆ ಸೀತಾರಾಮುವೊಬ್ಬ ಗೋಮುಖವ್ಯಾಘ್ರನೆಂದೂ ನಾನು ನಂಬಿದೆ. ಶ್ಯಾಮನಿಗೆ ವಿಪರೀತ ಹಿಂಸೆ ಕೊಡುತ್ತಾನೆ, ಕಿರುಕುಳಪಡಿಸುತ್ತಾನೆಂದೂ ಅದರಿಂದ ಶ್ಯಾಮ್ ಅವನ ವಿರುದ್ಧ ದಂಗೆಯೇಳುವುದು ಸರಿಯೆಂದೂ ನನ್ನ ಮನಸ್ಸು ಒಪ್ಪಿತು. ಶ್ಯಾಮನ ಈ ಚರ್ಯೆಯಿಂದ ಸೀತಾರಾಮುವಿನ ಬಗ್ಗೆ ನನಗೂ ತಾತ್ಸಾರ ಬರಲು ಕಾರಣವಾಯಿತು.

ಇದಾದ ಕೊಂಚ ದಿನ ಕಳೆಯಿತು. ಒಂದು ದಿನ ನಾನು ಪೇಟೆಯ ಕಡೆಗೆ ಹೊರಟಾಗ ದಾರಿಯಲ್ಲೇ ಸೀತಾರಾಮುವನ್ನು ಕಂಡೆ ಅವನನ್ನು ನೋಡಿದರೂ ನೋಡದವನಂತೆ ಹೊರಟೆ. ಅವನಾಗಿಯೇ ಕೂಗಿ ನನ್ನನ್ನು ಮಾತಾಡಿಸಿದ. ಬಹಳ ಸೌಜನ್ಯದಿಂದ, ವಿಶ್ವಾಸದಿಂದ ನನ್ನನ್ನು ಕಂಡ. ಆದರೆ ಅದೆಲ್ಲ ವಂಚನೆಯೆಂದು ನಾನು ಅಂದುಕೊಂಡಿದ್ದೆ. ಮೊದ್ದು ಮನುಷ್ಯನಿಗೆ ವಂಚನೆ ಸಾಧ್ಯವೆ ಎಂಬುದು ಕೂಡ ನನಗೆ ತೋಚಲಿಲ್ಲ. ಕೆಟ್ಟವನು, ಮೂರ್ಖ ಎಂದು ಅವನ ವಿಷಯವಾಗಿ ಶ್ಯಾಮ್ ಎರಡು ವಿಶೇಷಣಗಳನ್ನು

ಉಪಯೋಗಿಸಿದ್ದ. ಎರಡನ್ನೂ ನಾನು ಒಪ್ಪಿದ್ದೆ. ಆ ದಿನ ಸೀತಾರಾಮು ನನ್ನನ್ನು ಕರೆದುಕೊಂಡು ಹೋಗಿ ಕಾಫಿ ಕೊಡಿಸಿದ. ಆ ಮಾತು ಈ ಮಾತು ಆಡುತ್ತಾ ಶ್ಯಾಮುನ ಮಾತನ್ನೂ ಆಡಿದ. ಅವನೇನು ಹೇಳಿದರೂ ನನ್ನದು ಅದಕ್ಕೆ ವಿರುದ್ಧಾಭಿಪ್ರಾಯವೇ! ಶ್ಯಾಮುನೆಂದರೆ ಸೀತಾರಾಮುವಿಗೆ ದ್ವೇಷ. ಆದುದರಿಂದ ಅವನು ಆಡುವ ಮಾತಿನಲ್ಲೆಲ್ಲಾ ಕಿಲುಬಿದೆಯೆಂದು ನಾನು ಮೊದಲೇ ತೀರ್ಮಾನಿಸಿದ್ದೆ. ಅವನ ಮಾತಿನಲ್ಲಿ ನಾನು ನಂಬಿಕೆ ಯಿಡುವಂತೆಯೇ ಇರಲಿಲ್ಲ. ತನ್ನ ತಮ್ಮ ಆಗಾಗ ಕೋಪಗೊಳ್ಳುತ್ತಾನೆ. ಅದು ಅವನ ಸ್ವಭಾವ. ಸಹಜವಾಗಿಯೇ ಬಂದುದೆಂದು ಸೀತಾರಾಮು ಹೇಳಿದರೂ ನಾನು ನಂಬಲು ಸಿದ್ಧನಾಗಿರಲಿಲ್ಲ. ಅವನ ಈ ಮಾತನ್ನು ನನ್ನ ಮನಸ್ಸು ಒಪ್ಪಲಿಲ್ಲ. ಶ್ಯಾಮುನ ಕೋಪಕ್ಕೆ ಅಂದಿನ ಘಟನೆಯೊಂದೇ ಸಾಕ್ಷಿಯಾಗಿತ್ತು. ಅದಕ್ಕಿಂತ ಬೇರೆ ಸಾಕ್ಷಿ ಬೇಕಾಗಿರಲಿಲ್ಲ. ಆದರೂ ನನಗೆ ಸೀತಾರಾಮುವಿನ ಮಾತು ಹಿಡಿಸಲಿಲ್ಲ. ನನಗೆ ನಂಬಲು ಇಷ್ಟ ವಿರಲಿಲ್ಲ. ಆದುದರಿಂದ ನಾನು ನಂಬಲಿಲ್ಲ. ಬದಲಿಗೆ ಸೀತಾರಾಮುವಿನ ಬಗ್ಗೆ ನನಗೆ ತಿರಸ್ಕಾರ ಹೆಚ್ಚಿತು. ತಾತ್ಸಾರ ಬಲಿಯಿತು.

ನಾನು ಶ್ಯಾಮುನೊಂದಿಗೆ ಆಗಾಗ ಅವರ ಮನೆಗೆ ಹೋಗುತ್ತಿದ್ದೆ. ಹೋದಾಗಲೆಲ್ಲ ಸಾಮಾನ್ಯವಾಗಿ ಲಕ್ಷ್ಮಿ ಕಣ್ಣಿಗೆ ಬೀಳುತ್ತಿದ್ದಳು. ನಾನು ಅಲ್ಲಿಗೆ ಹೋಗಲು ಅದೂ ಒಂದು ಕಾರಣ. ಎದುರಿಗೆ ಯಾರಾದರು ಗಂಡಸರನ್ನು ಕಂಡರೆ ಅದೇತಾನೆ ಬಯಲಿಗೆ ಬರುತ್ತಿದ್ದ ಹೆಣ್ತನದ ನಾಚಿಕೆಯಿಂದ ತಲೆ ತಗ್ಗಿಸಿ ಲಕ್ಷ್ಮಿ ಒಳಕ್ಕೆ ಓಡಿಹೋಗುತ್ತಿದ್ದಳು. ಆಗ ನನ್ನ ಕಣ್ಣು ಅವಳನ್ನೇ ಹುಡುಕುತ್ತಿತ್ತು. ಮನಸ್ಸಿನಲ್ಲಿ ಅವಳ ಸುಂದರ ರೂಪವೇ ಕುಣಿಯುತ್ತಿತ್ತು. ಹಾಗೆಯೇ ಅದೇ ಗುಂಗಿನಲ್ಲಿ ಎಷ್ಟೋ ಹೊತ್ತು ಸುಮ್ಮನೆ ನಿಂತಿರುತ್ತಿದ್ದೆ.

ನಾನು, ಶ್ಯಾಮ್, ಇಬ್ಬರೂ ಜತೆಯಲ್ಲೇ ಓದುತ್ತಿದ್ದೆವು. ಅವನ ಓದುಗಾರಿಕೆ ನನಗೆ ತಿಳಿಯಲು ಇದರಿಂದ ಅನುವಾಯಿತು. ನನ್ನ ಸ್ನೇಹದಿಂದ ಶ್ಯಾಮುನಿಗೇನೋ ಖಂಡಿತವಾಗಿಯೂ ಅನುಕೂಲವಾಯಿತೆಂದು ನಾನು ಹೇಳಬಲ್ಲೆ. ನನ್ನಿಂದ ಓದುಗಾರಿಕೆಯಲ್ಲಿ ಬೇಕಾದಷ್ಟು ಸಹಾಯ ಪಡೆದ. ಅವನಿಗೆ ಅರ್ಥವಾಗದ ಎಷ್ಟೋ ಸಂಗತಿಗಳನ್ನು

ನಾನು ಗಂಟೆಗಟ್ಟಲೆ ಹೇಳಿದೇನೆ. ನನಗೆ ಅದೂ ಒಂದು ಹೆಮ್ಮೆ. ಶ್ಯಾಮುನಂತಹವನಿಗೆ ಹೇಳಿಕೊಟ್ಟೆನಲ್ಲ ಎನ್ನುವ ಜಂಭ. ನಾವಿಬ್ಬರೂ ಓದುವಾಗ ಅವನ ಅಣ್ಣ ಸೀತಾರಾಮು ಅಲ್ಲೇನಾದರೂ ಸುಳಿದರೆ ಶ್ಯಾಮ್ ಬೆಂಕಿಯುಬೆಟ್ಟವಾಗುತ್ತಿದ್ದ. ನಾನಂತೂ ಸೀತಾರಾಮು ಎದುರಿಗೇ ಇದ್ದರೂ ಅವನ ಮೂಲಕವೇ ದಿಟ್ಟಿಸಿ ನೋಡುತ್ತಿದ್ದೆ. ಅವನನ್ನು ಲೆಕ್ಕಕ್ಕೆ ತೆಗೆದುಕೊಳ್ಳುತ್ತಿರಲಿಲ್ಲ ಅಸಡ್ಡೆ, ತಾತ್ಸಾರ. ಆದರೆ ಅಕಸ್ಮಾತ್ತಾಗಿ ಬಳೆಗಳ ಸದ್ದು ಕಿವಿಗೆ ಬಿದ್ದರೆ ಕಣ್ಣು ಓಡುತ್ತಿತ್ತು. ಮನಸ್ಸು ಎಡವುತ್ತಿತ್ತು. ಅದೂ ಒಂದೆರಡು ಕ್ಷಣ ಅಷ್ಟೇ !

ಶ್ಯಾಮುನ ತಾಯಿ, ಗೌರಮ್ಮನವರು ನನ್ನನ್ನು ಬಹಳ ವಿಶ್ವಾಸದಿಂದ ನೋಡುತ್ತಿದ್ದರು. ಹಳೆಯಕಾಲದ ತಾಯಂದಿರಂತೆ ಮಮತೆ ತೋರಿಸುತ್ತಿದ್ದರು. ನಾನು ಅಲ್ಲಿಗೆ ಹೋದಾಗಲೆಲ್ಲ ತಿಂಡಿ, ಕಾಫಿ ಕೊಡುತ್ತಿದ್ದರು. "ನೀನೂ ನಮ್ಮ ಮನೆಯವನೇ. ನಮ್ಮ ಶಾಮ್‌ಸುಂದ್ರು ಹೇಗೋ ಹಾಗೆಯೇ ನೀನು" ಎಂದು ಎಷ್ಟೋ ಬಾರಿ ಬಹಳ ಪ್ರೀತಿಯಿಂದ ಹೇಳುತ್ತಿದ್ದರು. ಆಗ ನನ್ನ ಕಣ್ಣಮುಂದೆ ಬಣ್ಣಬಣ್ಣದ ಕನಸುಗಳು. ಗೊತ್ತೇ ಇದೆ. ನಾನು ಅವರ ಮನೆಯವನಾಗುವ ಒಂದೇ ಬಗೆ--ಲಕ್ಷ್ಮಿಯನ್ನು ಮದುವೆಯಾಗಿ ಮನೆಯ ಅಳಿಯನಾದಂತೆ ಗಾಳಿಗೋಪುರ ಕಟ್ಟುತ್ತಿದ್ದೆ. ಆಗ ಶ್ಯಾಮ್, ಸೀತಾರಾಮು ಇವರೆಲ್ಲ ಮರೆತು ಹೋಗುತ್ತಿದ್ದರು. ಆ ಕನಸು ಕಟ್ಟುತ್ತಿರುವಾಗ ಯಮುನಾ, ಲಲಿತಾ ನನ್ನ ಪಾಲಿಗೆ ಇಲ್ಲದಂತೆಯೇ !

ಯಮುನಾಗೆ ನಾನು ಶ್ಯಾಮುನ ವಿಚಾರವಾಗಿ ಬೇಕಾದಷ್ಟು ಹೇಳಿದ್ದೆ. ಅವನ ಬಗ್ಗೆ ದಿನಂಪ್ರತಿ ವರದಿಯನ್ನೇ ಒಪ್ಪಿಸುತ್ತಿದ್ದೆ. ನನ್ನ ಕಣ್ಣೆದುರಿಗೇ ಅವನನ್ನು ನಾಲ್ಕಾರು ಸಂಘಗಳ ಕಾರ್ಯದರ್ಶಿಗಳು, ನಾಟಕದಲ್ಲಿ ಪಾತ್ರ ವಹಿಸಬೇಕೆಂದು ಬೇಡಿಕೊಂಡುದು. ಒಬ್ಬಿಬ್ಬರಿಗೆ ಸಾಧ್ಯವಿಲ್ಲವೆಂದು ಕಟುವಾಗಿ ಉತ್ತರ ಹೇಳಿದುದು. ಉಳಿದವರನ್ನು ಗೋಳಾಡಿಸಿದುದು. ಅವರು ಅಂಗಲಾಚಿಕೊಂಡಾಗ, ಗೊಣಗುತ್ತಾ ಒಪ್ಪಿದುದು. ಆಮೇಲೆ ನಾಟಕದ ಅಭ್ಯಾಸಕ್ಕೆ ತಪ್ಪಿಸಿಕೊಂಡು, ಕಾರ್ಯದರ್ಶಿಗೇ ದಬಾಯಿಸಿದುದು. ಅಭ್ಯಾಸ ನಡೆಯುವಾಗ ಉಳಿದವರಮೇಲೆ ಅವನು ತೋರಿಸುತ್ತಿದ್ದ

ದರ್ಪ, ಅಭ್ಯಾಸದ ಕೋಣೆಯಲ್ಲಿ ಅವನಿಗೂ ಇನ್ನೊಬ್ಬನಿಗೂ ಯಾವುದೋ ಸಣ್ಣ ಮಾತಿಗೆ ಜಗಳ ಬಂದು 'ನಿಮ್ಮ ನಾಟಕವು ಹಾಳಾಗಲಿ' ಎಂದು ಶ್ಯಾಮು ಬಿಟ್ಟು ಬಂದುದು. ಕೊನೆಗೆ ಜಗಳವಾಡಿದವನು ತನ್ನ ತಪ್ಪನ್ನೊಪ್ಪಿಕೊಂಡು ಶ್ಯಾಮುನ ಬಳಿ ಬಂದು ಕ್ಷಮೆ ಬೇಡಿದುದು ಎಲ್ಲವನ್ನೂ ಯಮುನೆಗೆ ತಿಳಿಸುತ್ತಿದ್ದೆ. ಆಗ ಅವನೇನು ಮಾಡಿದರೂ ಅದು ಸರಿಯೆಂದೇ ನನ್ನ ಭಾವನೆ !

ಶ್ಯಾಮುನಲ್ಲಿ ಇನ್ನೂ ಒಂದು ಹೆಚ್ಚಳವಿತ್ತು. ಚಿತ್ರಗೀತೆಗಳನ್ನು ಬಹಳ ಚೆನ್ನಾಗಿ ಹಾಡುತ್ತಿದ್ದ. ಕಾಲೇಜಿನಲ್ಲಿ ಇದುವರೆಗೂ ಅವನು ಒಂದು ಬಾರಿಯೂ ಹಾಡಿರದಿದ್ದರೂ ಒಂದು ದಿನ ಅವನ ಮನೆಯಲ್ಲಿ ಕೆಲವು ಹಾಡುಗಳನ್ನು ಹೇಳಿದ್ದ. ಬಹಳ ಮಧುರವಾದ ಕಂಠ. ಸಂಗೀತ ಬರದಿದ್ದರೂ ತಿಳಿಯುತ್ತಿತ್ತು. ಧ್ವನಿ ಹಿಡಿಯುವ ಸೂಕ್ಷ್ಮಕಿವಿಯಿತ್ತು. ಚಿತ್ರಗಳಲ್ಲಿನ ಹಾಡನ್ನು ಒಂದೆರಡು ಬಾರಿ ಕೇಳಿದರೇ ಸಾಕು. ಮತ್ತೊಮ್ಮೆ ಕೊಂಚವಾದರೂ ತಪ್ಪಿಲ್ಲದೆ ಹಾಡುತ್ತಿದ್ದ. ಹಾಡಿನ ಪಲುಕುಗಳನ್ನು ಕೂಡ ತಪ್ಪುತ್ತಿರಲಿಲ್ಲ. ಅವನು ಕಾಲೇಜಿನಲ್ಲಿ ನಟನೆಂದು ಹೆಸರು ಮಾಡಿಕೊಂಡಿದ್ದರಿಂದ ಯಾರಿಗೂ ಅವನ ಈ ಗುಣ ತಿಳಿದಿರಲಿಲ್ಲವೆಂದು ತೋರುತ್ತದೆ. ಅಂದು ಅವನ ಮನೆಯಲ್ಲಿ ಜುತಿಕಾರಾಯ್ ಹಾಡಿದ ಯಾವುದೋ ಭಜನೆಯನ್ನು ಹಾಡಿದ. ಅವನ ಹೆಣ್ಣುದನಿಯ ಮಾಧುರ್ಯ ಬೆಳದಿಂಗಳ ಲೋಕದಲ್ಲಿ ಸ್ವಪ್ನ ಕಂಡಂತೆ ಮನಸ್ಸನ್ನು ಮರೆಸಿತು. ಮನೆಗೆ ಬಂದೊಡನೆಯೇ ಯಮುನೆಗೆ ಹೇಳಿದೆ. ಅವನು ಬಹಳ ಸೊಗಸಾಗಿ ಹಾಡಬಲ್ಲನೆಂದು ಮನಸಾರ ಹೊಗಳಿದೆ. ನಾನು ಹೇಳಿದ್ದೇ ತಪ್ಪಾಯಿತು. ತಾನೂ ಶ್ಯಾಮುನ ಹಾಡು ಕೇಳಬೇಕೆಂದು ಅವಳು ಆಸೆ ಪಟ್ಟಳು. ಒಂದುಬಾರಿ ಹೇಳಿ ಮರೆತುಬಿಡಲಿಲ್ಲ. ಪದೇ ಪದೇ ನನಗೆ ನೆನಪುಮಾಡಿಕೊಡುತ್ತಿದ್ದಳು. ಹಿಂಸೆಗೇ ಇಟ್ಟುಕೊಂಡಿತು. ಹೇಗಾದರೂ ಸರಿ. ಒಂದು ಬಾರಿ ಅವನಿಂದ ಹಾಡಿಸು. ನಾನು ಕೇಳಬೇಕೆಂದು ಹಟ ಹಿಡಿದಳು. ಅವಳ ಜತೆಗೆ ಲಲಿತೆಯದೂ ರಂಪು ! ನನಗೆ ಉಭಯಸಂಕಟ. ಅವನಿಗೆ ಹೇಳಿ ಅವನನ್ನು ಒಪ್ಪಿಸುವುದು ಕಷ್ಟದ ಕೆಲಸ. ಅವನನ್ನು ಕೇಳಲು ಸಂಕೋಚ. ಆಮೇಲೆ ಏನೆಂದು

ಬಿಡುವನೋ ಎಂದು ಹೆದರಿಕೆ. ಹೋಗಲಿ ಒಪ್ಪಿಸೋಣವೆಂದರೆ ಯಮುನಾ, ಲಲಿತಾ ಕೇಳುವಂತೆ ಎಲ್ಲಿ ಹಾಡಲು ಸಾಧ್ಯ? ಎಲ್ಲಿ ಕುಳಿತುಕೊಳ್ಳುವುದು? ನನ್ನ ಕೋಣೆಯಂತೂ ಆಗದ ಮಾತು. ನನ್ನ ಕೋಣೆಗೆ ಅವರಿಬ್ಬರೂ ಬರುವಂತಿರಲಿಲ್ಲ. ಹೀಗಾಗಿ ನಾನು ಆ ಮಾತನ್ನು ತೇಲಿಸಲು ಯತ್ನಿಸಿದೆ. ಆದರೆ ಯಮುನಾಗೆ ಸಮಾಧಾನ ಮಾಡುವುದಂತೂ ನನ್ನಿಂದ ಆಗಲೇ ಇಲ್ಲ. ಎಷ್ಟೇ ಹೇಳಿದರೂ ತಾನು ಹಿಡಿದ ಪಟ್ಟನ್ನು ಅವಳು ಬಿಡಲೇ ಇಲ್ಲ. ಒಂದು ದಿನವಂತೂ ನನ್ನ ಮೇಲೆ ರೇಗಿಯೇ ಬಿಟ್ಟಳು. “ಶ್ಯಾಮುನನ್ನು ನಾವೆಲ್ಲಿ ಹೊಗಳಿಬಿಡುತ್ತೇವೋ ಎಂದು ನಿನಗೆ ಅಸೂಯೆ!” ಎಂದು ನನ್ನನ್ನು ಹಳಿದಳು. ನನಗೆ ಅಸೂಯೆಯೇನೋ ಇತ್ತು. ನಿಜ. ಆದರೆ ಶ್ಯಾಮುನನ್ನು ಹೊಗಳುವರು ಎಂದಲ್ಲ. ಶ್ಯಾಮುನನ್ನು ಹೊಗಳಿದರೆ ನನ್ನನ್ನೇ ಹೊಗಳಿದಷ್ಟು ಆನಂದ ನನಗೆ. ಅವರು ಶ್ಯಾಮುನ ಜತೆಯಲ್ಲಿ ಎಲ್ಲಿ ಮಾತಾಡಿಬಿಡುವರೋ ಎಂದು ನನಗೆ! ಅವನು ಅವರನ್ನು ಕಣ್ಣೆತ್ತಿ ನೋಡಿದರೆ ಹೊಟ್ಟೆಯುರಿದುಕೊಳ್ಳುವ ಸ್ವಭಾವವಲ್ಲವೇ ನನ್ನದು! “ನೀನು ನನ್ನೊಂದಿಗೆ ಮಾತಾಡಬೇಡ!” ಎಂದು ಸೆಟೆದುಕೊಂಡು ಹೊರಟು ಹೋದಳು. ಅದೆಲ್ಲಾ ಬರಿಯ ಸೋಗು, ಹೀಗೆ ಹೋಗಿ ಹಾಗೆ ಬಂದುಬಿಡುವಳೆಂದುಕೊಂಡಿದ್ದೆ ಮೊದಲು. ಕೊಂಚ ಅಸಡ್ಡೆ ತೋರಿಸಿ ಅಲ್ಲೇ ನಿಂತೆ. ಹತ್ತು ನಿಮಿಷವಾದರೂ ಯಮುನಾ ಬರಲಿಲ್ಲ. ಲಲಿತ ಬಂದವಳು ಮೂತಿ ಸೊಟ್ಟಗೆ ಮಾಡಿಕೊಂಡು ಮಾತಾಡಿಸದೆಯೇ ಹೊರಟು ಹೋದಳು. ಭಾರವಾದ ಮನಸ್ಸಿನಿಂದ ನನ್ನ ಕೋಣೆಗೆ ನಾನು ಹಿಂತಿರುಗಿದೆ. ಇದಾದ ಮೂರು ನಾಲ್ಕು ದಿನ ಸಂಜೆ ನಾನು ಮಾತಾಡಿಸಲು ಹೊರಟಾಗಲೆಲ್ಲ ಮುಖ ತಿರುಗಿಸಿಕೊಂಡು ಆಕಡೆಗೆ ಹೊರಟು ಹೋದಳು. ನನಗೆ ದುಃಖ, ಕೋಪಗಳೆರಡೂ ಮನಸ್ಸಿನಲ್ಲಿ ಕುದಿಯುತ್ತಿದ್ದುವು. ಆದರೆ ಏನು ಮಾಡಲಿ?

ನಿರ್ವಾಹವಿಲ್ಲದೆ ಶ್ಯಾಮುನನ್ನು ಕೇಳಿದೆ. ಅವನೂ ಸುಲಭವಾಗಿ ಒಪ್ಪುವವನಲ್ಲ. ಹೆಂಗಸರು ಮಾಡುವಂತೆ ಮುರುಕು ಮಾಡಲಾರಂಭಿಸಿದ. “ಹೆಂಗಸರ ಮುಂದೆ ಹಾಡುವುದು ಹ್ಯಾಗಪ್ಪಾ? ಎಷ್ಟಿದ್ದರೂ ಹೆಂಗಸರು ಸಂಗೀತ ಬಲ್ಲವರು. ಅದರಲ್ಲೂ ನಿನ್ನ *Cousins* ಗೆ ಬಹಳ ಚೆನ್ನಾಗಿ

ಸಂಗೀತ ಬರುತ್ತೆ. ನಾನು ಹಾಡುವುದಿಲ್ಲಪ್ಪ '' ಎಂದುಬಿಟ್ಟ. ನನಗೆ ಇದ್ದುದೂ ನಿರಾಸೆಯಾಯಿತು. ಯಮುನಾ, ಲಲಿತಾ ಇಬ್ಬರೂ ಚೆನ್ನಾಗಿ ಹಾಡುತ್ತಾರೆಂದು ಅವನಿಗೆ ಒಂದು ದಿನ ಹೇಳಿಬಿಟ್ಟಿದ್ದೆ. ಈಗ ಅದನ್ನೇ ಅವನು ಉಪಯೋಗಿಸಿಕೊಳ್ಳುತ್ತಿದ್ದ. ನಾನು ಇಕ್ಕಟ್ಟಿನಲ್ಲಿ ಸಿಕ್ಕಿಕೊಂಡಿದ್ದೆ. ಅವನನ್ನು ಬಹಳ ಕೇಳಿಕೊಂಡಮೇಲೆ ಒಪ್ಪಿಕೊಂಡ; ಆದರೆ ಒಂದು ಷರತ್ತಿನ ಮೇಲೆ. ಅವರಿಬ್ಬರಿಂದಲೂ ಹಾಡಿಸಿದರೆ ತಾನು ಹಾಡುತ್ತೇನೆ. ಇಲ್ಲದಿದ್ದರೆ ಸಾಧ್ಯವಿಲ್ಲ ಎಂದುಬಿಟ್ಟ. ನನ್ನ ವಿಷಯ ಹೇಳಿಕೊಳ್ಳುವ ಸಂಭ್ರಮದಲ್ಲಿ ಯಮುನೆಯ ಸಂಗೀತದ ವಿಷಯ ಯಾಕೆ ಹೇಳಿದೆನೋ ಎಂದು ನನಗೆ ನೈ ಪರಚಿಕೊಳ್ಳುವ ಹಾಗಾಯಿತು. ಅವಳನ್ನು ಹಾಡೆಂದು ಕೇಳೋಣವೆಂದರೆ ಹೆಣ್ಣು ಹಾವಿನಂತೆ ಬುಸುಗುಟ್ಟುತ್ತಿದ್ದಳು. ಅವನಾದರೋ ಅದಕ್ಕಿಂತ ಸುಲಭವಾದ ಕೆಲಸ ಇನ್ನೇನೂ ಇಲ್ಲವೆನ್ನುವಂತೆ "ಅವರಿಂದ ಹಾಡಿಸಿಬಿಡು. ನಾನು ಯಾವಾಗಲೂ ಸಿದ್ಧ'' ಎನ್ನುತ್ತಿದ್ದ. ಈ ಪೇಚಾಟದಲ್ಲಿ ಒಂದು ವಾರ ಕಳೆಯಬೇಕಾದರೆ ಒಂದು ಯುಗ ಕಳೆಯುವಂತಾಗಿ ಹೋಯಿತು. ಆ ಒಂದು ವಾರ ನನಗೆ ಯಮುನೆಯ ಮಾತಿರಲಿ, ಮುಖ ದರ್ಶನವೂ ಸಿಗಲಿಲ್ಲ!

ಈ ಬಿಕ್ಕಟ್ಟಿನಿಂದ ನನ್ನನ್ನು ಉಳಿಸಿದುದು ಒಂದು ನಾಟಕ. ವಿಶ್ವವಿದ್ಯಾನಿಲಯದ ಸಂಘದ ವಾರ್ಷಿಕೋತ್ಸವಲ್ಲಿ ಹಲವಾರು ನಾಟಕಗಳನ್ನು ಆಡಬೇಕೆಂದು ತೀರ್ಮಾನಿಸಿದರು. ನಾಟಕದ ಉಪ ಸಮಿತಿಗೆ ಶ್ಯಾಮನನ್ನೇ ಕಾರ್ಯದರ್ಶಿಯನ್ನಾಗಿ ಆರಿಸಿದರು. ಬಸವನ ಬಾಲ ನಾನು. ನನ್ನನ್ನೂ ಉಪಸಮಿತಿಗೆ ಸದಸ್ಯನನ್ನಾಗಿ ಸೇರಿಸಿಕೊಂಡರು. ಕನ್ನಡ ನಾಟಕ 'ಮೀರಾ' ಆಡಬೇಕೆಂದು ಶ್ಯಾಮನೇ ಸೂಚಿಸಿದ. ಅವನ ಮಾತಿಗೆ ಎದುರು ಹೇಳುವವರು ಯಾರೂ ಇಲ್ಲ! ಪಾತ್ರಗಳ ಹಂಚಿಕೆಯಲ್ಲೂ ಅವನದೇ ಆಡಳಿತ. ಅವನೇ ಮೀರಾಬಾಯಿಯ ಪಾತ್ರ ವಹಿಸಬೇಕೆಂದೂ, ಕಾಲೇಜಿನಲ್ಲಿ ಬಹಳ ಚೆನ್ನಾಗಿ ಹಾಡುವವನೆಂದು ಹೇಳಿಸಿಕೊಳ್ಳುತ್ತಿದ್ದ ಅಚ್ಯುತರಾವ್ ತಾನ್‌ಸೇನನ ಪಾತ್ರ, ವಹಿಸಬೇಕೆಂದೂ ತೀರ್ಮಾನವಾಯಿತು. ತಾನ್‌ಸೇನನಿಗೆ ಒಂದು

ಹಾಡಿತ್ತು. ಆದರೆ ಮೀರಾಬಾಯಿ ಎರಡು ಭಜನೆಗಳನ್ನು ಹೇಳಬೇಕಾಗಿತ್ತು. ಶ್ಯಾಮುನಿಗೆ ಹಾಡಲು ಬರುವುದೇ ಎಂದು ಅವರಿಗೆಲ್ಲ ಯೋಚನೆ. ಕೇಳುವ ಧೈರ್ಯ ಸಾಲದು. ಆದರೆ ಕೇಳದಿದ್ದರೆ ಆಗುವಂತಿಲ್ಲ. ಒಬ್ಬ ನನ್ನನ್ನು ಪಿಸುದನಿಯಲ್ಲಿ ಕೇಳಿದ. "ಮೀರಾಬಾಯಿಯ ಹಾಡಿಗೆ ಏನು ಮಾಡುವುದು? ಕೇಳ್ರೀ, ಶ್ರೀನಿವಾಸ್" ಎಂದ. ಶ್ಯಾಮುನಿಗೆ ಈ ಮಾತು ಕೇಳಿತೋ ಏನೋ-ಅಂತೂ ಹಿರಿತನದ ಗಾಂಭೀರ್ಯದಿಂದ ಒಂದು ನಗು ನಕ್ಕ. ಆ ನಗೆಯ ಕಿರುಬಿಂಬ ನನ್ನ ಮುಖದಲ್ಲೂ ತೋರಿತು. "ಅಯ್ಯೋ ಕುರಿಗಳಿರಾ! ಅವನೆಂತಹ ಹಾಡುಗಾರನೆಂಬುದು ನಿಮಗೇನು ಗೊತ್ತು !" ಎಂದು ಮನಸ್ಸಿನಲ್ಲೇ ಅಂದುಕೊಂಡೆ.

"ಅವರು ಹಾಡುತ್ತಾರೆ. ಯೋಚಿಸಬೇಡಿ" ಎಂದೆ ನಾನು ಪಕ್ಕದವನೊಂದಿಗೆ.

ನನ್ನ ಮಾತಿನಿಂದ ಅವನಿಗೆ ಸಮಾಧಾನವಾಯಿತೋ ಇಲ್ಲವೋ. ಅಂತೂ ಮತ್ತೆ ಮಾತಿಲ್ಲದೆ ಸುಮ್ಮನಾದ. ನಾಟಕದಲ್ಲಿ ಅವನು ಹಾಡುತ್ತಾನೆಂದು ತಿಳಿಸಿದಮೇಲೆ ಯಮುನಾ ನನ್ನೊಂದಿಗೆ ಮತ್ತೆ ಮಾತಾಡಲಾರಂಭಿಸಿದಳು. ನನಗೆ ಉಸಿರು ಬಂದಂತಾಯಿತು.

ಆ ನಾಟಕದಲ್ಲಿ ಅವನು ಪಾತ್ರವಹಿಸಿದಂತೆ ಮತ್ತೆಂದೂ ವಹಿಸಿರಲಿಲ್ಲ. ನಿಜವಾಗಿಯೂ ಮೀರಾಬಾಯಿಯೇ ಕಣ್ಣೆದುರಿಗೆ ಬಂದು ನಿಂತಂತ್ತಿತ್ತು. ಕಾಲೇಜಿನ ಅಂಗಳ ಕಿಕ್ಕಿರಿದಿತ್ತು. ಆದರೂ ಕೊಂಚವಾದರೂ ಸದ್ದಿರಬೇಕಲ್ಲ! ಕೃಷ್ಣನ ವಿಗ್ರಹವನ್ನು ಮುಂದೆ ಇಟ್ಟುಕೊಂಡು, ವಿಷಪಾನಕ್ಕೆ ನಿರತಳಾಗಿ ಮೀರಾ "ಮೇರಿ ಲಾಜ ಲಟಕ ತೇರ ಚರನನಕಿ" ಎಂದು ಹಾಡಿದಾಗ, ಸೇರಿದ್ದವರೆಲ್ಲರ ಕಣ್ಣೂ ತೇವವಾಯಿತು. ನನಗಂತೂ ಕಣ್ಣಿನಿಂದ ನೀರು ಒಂದೇ ಸಮನಾಗಿ ಹರಿಯುತ್ತಿತ್ತು. ಅವನಿಗೂ ಆವೇಶ ಬಂದಂತಿತ್ತು. ಎರಡೇ ಕೀರ್ತನೆಗೆ ಬದಲು ಮೂರು ನಾಲ್ಕು ಹಾಡಿದ. "ರಾಖೋ ಲಾಜ ಹರಿ, ತುಮ ಮೇರಿ" "ಮೇರಿ ಅಂಗನಮೆ ಮುರಲಿ ಬಜಾ" "ಬೃಂದಾವನಮೇ,ಮುರಲೀ ಗುನಗುನ"ಭಜನೆಗಳನ್ನು ಕೇಳಿದವರೆಲ್ಲ ಅವನನ್ನು ಮೆಚ್ಚಿಕೊಂಡರು. ಸಭೆಗೆ ಅಧ್ಯಕ್ಷರಾಗಿದ್ದವರು

ಅವನಿಗೆ ತಮ್ಮದೊಂದು ಬೆಳ್ಳಿಯ ಕಪ್ಪನ್ನು ಬಹುಮಾನವಾಗಿ ಕೊಟ್ಟರು. ಅಂದು ಅವನ ವಿಜಯದ ದಿನ. ಬಣ್ಣ ತೆಗೆಯುವಾಗ ಅವನ ಮುಖದಲ್ಲಿ ಎಲ್ಲೂ ಇಲ್ಲದ ಆನಂದ ಕಾಣುತ್ತಿತ್ತು.

" ಹೇಗಿತ್ತೋ, ನೀನು? " ಎಂದ.

" ಲೋ-*Wonderful-superb* " ಎಂದೆ.

" ನಿನ್ನ *Cousins* ಏನಂದರು? "

" ನಾನು ಅವರನ್ನು ನೋಡಿಲ್ಲ. ನಾಳೆ ಹೇಳ್ತೀನಿ "

ಅಷ್ಟರಲ್ಲಿ ಅವನಣ್ಣ ಸೀತಾರಾಮು ಅಲ್ಲಿಗೆ ಬಂದ. ಕೂಡಲೇ ಶ್ಯಾಮುನ ಮುಖ ಗಂಟಿಕ್ಕಿತ್ತು. ಸೀತಾರಾಮು ಅವನನ್ನು ಹೊಗಳಿದರೂ ಶ್ಯಾಮ್ ಒಂದು ಮಾತೂ ಆಡಲಿಲ್ಲ. ಸೀತಾರಾಮು ಮಾತಿಲ್ಲದೆ ಹೊರಟುಹೋದ. ನನಗೆ ಮನಸ್ಸಿನಲ್ಲೇ ಹೇಳಲಾರದ ಒಂದು ಅಸಮಾಧಾನ ಹುಟ್ಟಿತು.

೬

"ವಿಾರಾ" ನಾಟಕವನ್ನಾಡುವ ವೇಳೆಗಾಗಲೇ ನಾವು ಏಕ ವಚನಕ್ಕಿಳಿದಿದ್ದೆವು. ಪಾಠ ಮುಗಿದೊಡನೆಯೇ ಇಬ್ಬರೂ ಸೇರಿತೆಂದರೆ ರಾತ್ರಿ ಊಟಕ್ಕೆ ಮನೆಗೆ ಹೋಗುವ ತನಕ ಒಬ್ಬರಜೊತೆಯನ್ನೊಬ್ಬರು ಬಿಡುವಂತಿಲ್ಲ. ನಾನು ಟೆನ್ನಿಸ್ ಆಡಲು ಹೊರಟರೆ ಅವನು ಅಲ್ಲಿ ಬಂದು ಕುಳಿತಿರುತ್ತಿದ್ದ. ಅವನು ನೋಡುತ್ತಿದ್ದನೆಂದರೆ ನನಗೊಂದು ರೀತಿಯ ಹುಮ್ಮಸ್ಸು, ಉತ್ಸಾಹ. ಯಾರಜೊತೆಯಲ್ಲಿಯೂ ಸೇರದೆ ಒಬ್ಬನೇ ಬೇರೊಂದು ಬೆಂಚಿನ ಮೇಲೆ ಕುಳಿತು ನನ್ನ ಆಟವನ್ನೇ ನೋಡುತ್ತಿದ್ದನೆಂದರೆ ನನಗೊಂದು ಹೆಮ್ಮೆ, ಸ್ಫೂರ್ತಿ. ಅವನ ಈ ಒಡನಾಟದಿಂದ ನನಗಾದ ಒಂದು ತೊಂದರೆಯೆಂದರೆ ಸಂಜೆ ಯಮುನಾ. ಲಲಿತೆಯರನ್ನ ನೋಡಲು ಸಮಯ ಸಿಗದುದು! ಆಟ ಮುಗಿದೊಡನೆಯೇ ಅವನೊಂದಿಗೆ ಸುತ್ತಿಕೊಂಡು ಬರಲು ಹೊರಡುತ್ತಿದ್ದೆ ಈ ಅಲೆದಾಟದಿಂದ ಅವನನ್ನು ಮನೆಗೆ ಬಿಟ್ಟು ನಾನು ಬರುವ ವೇಳೆಗೆ ಬಹಳ ಕತ್ತಲಾಗುತ್ತಿತ್ತು. ಮನೆಗೆ ಬಂದಮೇಲೆ "ಈವತ್ತು ಯಮುನೆಯನ್ನು ನೋಡಲಿಲ್ಲವಲ್ಲ' ಎನಿಸುತ್ತಿತ್ತು. ಅವನ ಜೊತೆಯಲ್ಲಿದ್ದಾಗ ಎಲ್ಲಾ ಮರೆತುಹೋಗುತ್ತಿತ್ತು. ರಾತ್ರಿ ಊಟ ಮುಗಿಸಿ ಪುಸ್ತಕ ಬಿಚ್ಚಿ ಓದಲು ಕುಳಿತರೆ ಯಮುನೆಯನ್ನು ಕಾಣದ ಚಿಂತೆ, ಕಾಣುವ ಬಯಕೆ ಬಂದು ಮನಸ್ಸನ್ನು ಕೆಡಿಸುತ್ತಿತ್ತು. ಬಿಚ್ಚಿದ ಪುಸ್ತಕ ಬಿಚ್ಚಿರುತ್ತಿತ್ತು, ತೆರೆದ ಕಣ್ಣು ತೆರೆದಿರುತ್ತಿತ್ತು. ಓದು ಮಾತ್ರ ನಿಂತಲ್ಲಿಯೇ ನಿಂತಿರುತ್ತಿತ್ತು!

ನಮ್ಮಿಬ್ಬರ ಗೆಳೆತನ ಬೆಳೆದಂತೆ ನನಗೆ ಒಂದು ಬಗೆಯ ಗರ್ವ. ನಾನು ಮೊದಲು ಸೇರುತ್ತಿದ್ದ ಬಳಗಕ್ಕೂ ನನಗೂ ನಡುವೆ ಈಗ ತೆರೆ ಬಿದ್ದಂತಾಗಿತ್ತು. 'ಅವರಿಗೇ ನನ್ನ ಸಹವಾಸ ಬೇಕಿರಲಿಲ್ಲವೋ, ನನಗೇ ಅವರೊಂದಿಗೆ ಸೇರಲಿಷ್ಟವಿರಲಿಲ್ಲವೋ, ಅಂತೂ ನನಗೂ ನನ್ನ ಹಳೆಯ ಬಳಗಕ್ಕೂ ಈಗ ಸಂಬಂಧ ಕಡಿದು ಹೋಗಿತ್ತು. ಅವರೆಲ್ಲರೂ ಕ್ರಿಮಿಗಳು ಎನ್ನುವಂತೆ ತಾತ್ಸಾರದಿಂದ ಅವರ ಕಡೆ ನೋಡುತ್ತಿದ್ದೆ. ಅವರಲ್ಲಿ ಯಾರಾದರೂ ಅಕಸ್ಮಾತ್ ಅಪ್ಪಿತಪ್ಪಿ ಮಾತನಾಡಿಸಿದರೆ, ತಿರಸ್ಕಾರದ ದನಿಯಲ್ಲಿ, ಶ್ರೀಮದ್ಗಾಂಭೀರ್ಯದಿಂದ ಉತ್ತರ ಕೊಡುತ್ತಿದ್ದೆ. ಅವರು

ನನ್ನನ್ನು ತಮ್ಮಲ್ಲೇ ಹಾಸ್ಯಮಾಡಿಕೊಳ್ಳುತ್ತಿದ್ದರು. ನನ್ನನ್ನು ಲಾಂಗೂಲ, 'ಶ್ಯಾಮನ ಬಾಲ' ಎಂದೆಲ್ಲಾ ಕರೆಯುತ್ತಿದ್ದರು. ಕರೆದರೆ ಕರೆಯಲಿ ಎಂದು ನಾನು ಸುಮ್ಮನಿದ್ದೆ. ನಾಟಕಗಳಾಯಿತೆಂದರೆ ಅಭ್ಯಾಸವಾಗುವಾಗಲೆಲ್ಲ ನಾನಿರುತ್ತಿದ್ದೆ. ಶ್ಯಾಮ್ ಎಲ್ಲಿದ್ದರೆ ನಾನು ಅಲ್ಲಿ ತಪ್ಪದೆ ಹಾಜರ್! ನಾಟಕವಾಗುವಾಗ ಬಣ್ಣದ ಕೋಣೆಯಲ್ಲೇ ನನಗೆ ಜಾಗ. ನಾಟಕವೆಲ್ಲಾ ಮುಗಿದು ಬಣ್ಣತೆಗೆಯುವ ತನಕವೂ ನಾನು ಶ್ಯಾಮನಿಗಾಗಿ ಕಾದಿರುತ್ತಿದ್ದೆ. ಒಂದೆರಡು ಬಾರಿಯಂತೂ ಬಣ್ಣ ತೆಗೆವನಂತರ ತಿಂಡಿ ತಿನ್ನಲು ಉಳಿದವರ ಜತೆಯಲ್ಲಿ ಅವನು ಹೊರಟುಹೋದ. ನಾನು ಮನಸ್ಸಿನ ಅಸಮಾಧಾನವನ್ನು ಹಾಗೆಯೇ ಅದುಮಿಕೊಂಡು ಅವನಿಗಾಗಿ ಕಾದಿದ್ದೆ. ಅನಂತರ ಅವನ ನಾಟಕದ ವಿಷಯ ಮಾತನಾಡುತ್ತಾ ಅವನ ಮನೆಯವರೆಗೂ ಅವನನ್ನು ಬಿಟ್ಟು ಮನೆಗೆ ಹಿಂತಿರುಗುತ್ತಿದ್ದೆ. ಮತ್ತೆ ನಾಲ್ಕುದಿನ ಅವನ ನಾಟಕದ ವಿಷಯವೇ ಮಾತುಕತೆ!

ಪರೀಕ್ಷೆ ಹತ್ತಿರ ಬಂದಂತೆ ನಾವಿಬ್ಬರೂ ಜತೆಯಲ್ಲೇ ಓದಲು ಆರಂಭಿಸಿದೆವು. ಇಬ್ಬರೂ ಮೈಬಗ್ಗಿಸಿ ಚೆನ್ನಾಗಿ ಓದಿದೆವು. ಅವನಿಗೆ ಲೆಕ್ಕದಲ್ಲೇ ಕೊಂಚ ಐಬು! ನನಗೆ ಲೆಕ್ಕವೆಂದರೆ ನೀರುಕುಡಿದಹಾಗೆ. ಇಬ್ಬರೂ ಪಟ್ಟಾಗಿ ಕುಳಿತು ಲೆಕ್ಕಮಾಡುತ್ತಿದ್ದೆವು. ಅಂತೂ ಓದಿಕೆ ಚೆನ್ನಾಗಿಯೇ ಸಾಗಿತ್ತು. ಪರೀಕ್ಷೆಯಲ್ಲಿಯೂ ಚೆನ್ನಾಗಿಯೇ ಮಾಡಿದ್ದೆವು. ಯಮುನಾ, ಲಲಿತಾ ಇಬ್ಬರೂ ಪರೀಕ್ಷೆಯಲ್ಲಿ ಚೆನ್ನಾಗಿ ಮಾಡಿದ್ದೇವೆಂದು ಹೇಳಿದರು. ಶ್ಯಾಮ್ ಅವರ ವಿಷಯ ಆಗಾಗ ವಿಚಾರಿಸುತ್ತಿದ್ದ. ಆರಂಭದಲ್ಲೇನೋ ನಾನು ಆ ವಿಚಾರವಾಗಿ ಹೇಳಿಬಿಡುತ್ತಿದ್ದರೂ ಅನಂತರ ಕೊಂಚ ಕಸಿವಿಸಿಪಡುತ್ತಿದ್ದೆ. ಅವನ ಬಗ್ಗೆ ನನಗೆ ಕೊಂಚ ಅಸೂಯೆ ಕೂಡ ಬರುತ್ತಿತ್ತು.

ಪರೀಕ್ಷೆ ಮುಗಿದೊಡನೆಯೇ ಯಮುನಾ, ಲಲಿತಾ ಊರಿಗೆಹೊರಟರು. ಆ ದಿನ ನನಗೆ ಚೆನ್ನಾಗಿ ನೆನಪಿದೆ. ಅದೇ ಮೊದಲಬಾರಿ ಯಮುನಾ, ಲಲಿತಾ ಮತ್ತು ಶ್ಯಾಮ್ ಮೂವರಿಗೂ ಒಬ್ಬರಿಗೊಬ್ಬರ ಪರಿಚಯ ಮಾಡಿಕೊಟ್ಟುದು. ಹಾಸನಕ್ಕೆ ಬೆಳಗಿನ ರೈಲಿನಲ್ಲೇ ಹೊರಡುವ ತೀರ್ಮಾನ ಮಾಡಿದ್ದಳು ಯಮುನಾ. ಎಂದಿನಂತೆಯೇ ಹಿಂದಿನ

ರಾತ್ರಿಯೆಲ್ಲ ನನಗೆ ನಿದ್ರೆಯೇ ಬರಲಿಲ್ಲ. ಯಮುನಾ, ಲಲಿತಾ ಇಬ್ಬರೂ ಊರಿಗೆ ಹೊರಟುಹೋದರೆ ನಾನು ಒಬ್ಬನೇ ಇರಬೇಕಲ್ಲ! ಈ ವಿರಹದ ಬೇಗೆ ಅಸಾಧ್ಯವಾಗಿ ತೋರಿತು. ಶ್ಯಾಮನು ಇನ್ನೆರಡು ದಿನದಲ್ಲೇ ತನ್ನ ಊರಿಗೆ ಹೊರಟುಬಿಟ್ಟರೆ ನನಗೆ ನಾನೇ ಗೆಳೆಯ. ನನಗೆ ನಾನೇ ಗತಿ! ಅಗಲಿಕೆಯ ನೋವಿನಿಂದ ಮನಸ್ಸು ಗಾರುಗೊಂಡಿತ್ತು. ಬೆಳಿಗ್ಗೆ ಅವರು ಹೋರಡುವ ರೈಲಿಗೆ ಬಿಟ್ಟುಬರಲು ಹೊರಟೆ. ಆ ದಿನ ಅವರು ರೈಲಿನಲ್ಲಿ ಹೊರಟುಹೋಗುವರೆಂದು ಶ್ಯಾಮನಿಗೆ ಹೇಳಿದ್ದೆ. ಆದರೆ ಅವನು ರೈಲುನಿಲ್ದಾಣಕ್ಕೆ ಬರುತ್ತಾನೆಂದುಕೊಂಡಿರಲಿಲ್ಲ. ನಾನು ಮನೆ ಬಿಟ್ಟು ಹೊರಡಲು ಸಿದ್ಧನಾಗುವ ಹೊತ್ತಿಗೇ ಶ್ಯಾಮ್ ಹೊರಗಿನಿಂದ ನನ್ನನ್ನು ಕೂಗಿದ. ತಾನೂ ರೈಲ್ವೆಸ್ಟೇಷನ್ನಿಗೆ ಬರುವುದಾಗಿಯೂ, ಪುಸ್ತಕದ ಅಂಗಡಿ ನೋಡಬೇಕೆಂದೂ ಹೇಳಿದ. ಅಂತೂ ನನ್ನ ಜತೆಯಲ್ಲೇ ರೈಲ್ವೆಸ್ಟೇಷನ್ನಿಗೆ ಬಂದ.

ನಾನು, ಯಮುನಾ, ಲಲಿತಾ ಮೂರುಜನವೂ ಮಾತನಾಡುತ್ತಾ ನಿಂತಿದ್ದೆವು. ಇನ್ನೂ ಗಾಡಿ ಸಿದ್ಧವಾಗಿರಲಿಲ್ಲ. ರೈಲು ಕಂಬಿಯಮೇಲೆ ನಿಂತೊಡನೆ ಹತ್ತಿಸಿ ಸಾಮಾನು ಕೊಟ್ಟುಬಿಡುವುದೆಂದು ನಾನಂದುಕೊಂಡು ಅವರೊಂದಿಗೆ ಮಾತನಾಡುತ್ತಾ ನಿಂತಿದ್ದೆ. ಸುತ್ತಲೂ ಮಂಜು ಬೀಳುತ್ತಿತ್ತು. ಇನ್ನೂ ಛಳಿಯಾಗುತ್ತಿತ್ತು. ರೈಲಿನಲ್ಲಿ ಹೊರಡಲು ಬಂದವರೆಲ್ಲ ಅಲ್ಲಿಂದಿಲ್ಲಿಗೆ ಓಡಾಡುತ್ತಿದ್ದರು. ಶ್ಯಾಮ್ ಆಕಡೆ ಪುಸ್ತಕದ ಅಂಗಡಿಯ ಹತ್ತಿರ ನಿಂತಿದ್ದ. ನಾನು ಯಮುನೆಯೊಂದಿಗೆ ಮಾತನಾಡುತ್ತಿದ್ದಂತೆ ಲಲಿತೆಯ ಕಣ್ಣು ಅವನ ಮೇಲೆಯೇ ನಟ್ಟಿದ್ದುದನ್ನು ನೋಡಿದೆ. ಒಂದೆರಡು ಬಾರಿಯೇನೋ ಸುಮ್ಮನೆ ಆಕಡೆ ದೃಷ್ಟಿ ಬಿದ್ದಿರಬಹುದೆಂದುಕೊಂಡಿದ್ದೆ. ಆದರೆ ಅವನ ಮೇಲಿಟ್ಟ ನೋಟವನ್ನು ಲಲಿತಾ ಬದಲಾಯಿಸಲೇ ಇಲ್ಲ. ನನಗೆ ಒಂದೇ ಬಾರಿಗೆ ರಕ್ತ ಕುದಿಯಿತು. ಭಗ್ಗನೆ ಹತ್ತಿಕೊಂಡು ಉರಿಯಿತು ನನ್ನ ಮನಸ್ಸು. ಬಿಳಿಯ ಷರಾಯಿ, ಬಿಳಿಯ ಷರಟು, ಮೇಲೊಂದು ನೀಲಿಯ ಉಲ್ಲನ್ ಸ್ವೆಟರ್ ಹಾಕಿದ್ದ ಶ್ಯಾಮ್ ನೋಡಲು ಮುದ್ದಾಗಿದ್ದ. ಆದರೆ ಅವನನ್ನು ಲಲಿತಾ ಆರೀತಿ ನೋಡಿದುದು ನನಗೆ ಸಹಿಸಲಿಲ್ಲ. ಶ್ಯಾಮನೂ ಕದ್ದು ಕದ್ದು ಲಲಿತಳನ್ನೇ ನೋಡುತ್ತಿದ್ದುದೂ ನನಗೆ ಕಾಣಿಸಿತು. ಅದೂ

ರೂಡ ನನ್ನ ಮನಸ್ಸಿಗೆ ಹಿಡಿಸಲಿಲ್ಲ. ಯಮುನೆಯೊಂದಿಗೆ ಆಡುತ್ತಿದ್ದ ಮಾತನ್ನು ಅರ್ಧದಲ್ಲೇ ನಿಲ್ಲಿಸಿಬಿಟ್ಟೆ. ಮುಂದೇನು ಮಾಡಬೇಕೆಂದು ತೋಚಲಿಲ್ಲ. ಅಷ್ಟರಲ್ಲಿಯೇ ಯಮುನಾ "ಸೀನು, ನಿನ್ನ *Friend* ಗೆ ನಮ್ಮ ಪರಿಚಯ ಮಾಡಿಕೊಡೋ" ಅಂದಳು.

"ಆಂ?" ನಾನು ತಬ್ಬಿಬ್ಬಾಗಿ ಕೇಳಿದೆ.

"ಅವರಿಗೆ ನಮ್ಮನ್ನು *Introduce* ಮಾಡೋ" ಅಂದಳು ಲಲಿತಾ ನಗುತ್ತಾ.

ಅವಳ ಈ ಚೆಲ್ಲಾಟ ನನಗೆ ಬೇಸರ ಹಿಡಿಸಿತು. ಈ ಮರುಳುನಗು, ಈ ಬಿಕ್ಕಿನ ಚೆಲ್ಲಾಟ, ಈ ಮೋಸದ ಲಲ್ಲೆ ಎಲ್ಲವೂ ಶ್ಯಾಮನಿಗೋಸ್ಕರವೇ ಎಂದು ನನಗೆ ಅನ್ನಿಸಿತು. ಆದರೆ ಆಡುವಂತಿಲ್ಲ! ಮನಸ್ಸು ಬೆಂಕಿ ಕಾರಲು ಸಿದ್ಧವಾಗುತ್ತಿತ್ತು. ಬಹಳ ಕಷ್ಟದಿಂದ ಬಿಗಿಹಿಡಿದೆ. ಶ್ಯಾಮ್ ನಮ್ಮ ಮಾತನ್ನು ಕೇಳುತ್ತಿದ್ದನೋ ಏನೋ. ಅಂತೂ ಆ ಸಮಯಕ್ಕೆ ಸರಿಯಾಗಿ ಬಂದ.

"ಸೀನು, ನಾನು ಪುಸ್ತಕ ನೋಡಿದ್ದಾಯಿತು. ಹೊಸದು ಯಾವುದೂ ಬಂದಿಲ್ಲ" ಎಂದ. ಮಾತನಾಡುವಾಗ ಯಾಕೋ ಏನೋ ರಕ್ತವೇರಿ ಕೆಂಪಾಯಿತು. ಕಣ್ಣು ನನ್ನ ಕಡೆಯಿಂದ ಯಮುನೆಯನ್ನು ಹಾದು ಲಲಿತೆಯ ಕಡೆಗೆ ಚಿಮ್ಮಿ ಬೆದರಿ ಹಿಂತಿರುಗುತ್ತಿತ್ತು. ಮತ್ತೆ ಅವಳ ಕಡೆಗೇ ಓಡುತ್ತಿತ್ತು.

"ಇವರೀಬ್ಬರೂ ನನ್ನ *Cousins* ಯಮುನಾ, ಲಲಿತಾ. ಇವನು-ನನ್ನ *Friend*—"

ನಾನು ಮಾತು ಮುಗಿಸುವುದರಲ್ಲೆ ಯಮುನಾ ಬಾಯಿಹಾಕಿದಳು. "ಗೊತ್ತು."

ಈ ಮಾತಿನಲ್ಲಿ ನಗಲು ಏನಿತ್ತೋ ನನಗಂತೂ ತಿಳಿಯದು. ಅಂತೂ ಅವರು ಮೂರು ಜನರೂ ನಕ್ಕರು. ನನಗೇನೋ ಅಳುವಂತಾಯಿತು.

"ನಿಮ್ಮವಿಾರಾ ಪಾತ್ರ ಬಹಳ ಚೆನ್ನಾಗಿತ್ತು" ಎಂದಳು ಯಮುನಾ.

ಅವನಿಗೆ ಇದ್ದಕ್ಕಿದ್ದಂತೆ ಮುಖ ರಂಗೇರಿತು. ಆರೀತಿ ಅವನಾದುದು ಅದೇ ಮೊದಲಬಾರಿ. ನಾನು ಕಂಡಹಾಗೆ.

"ಏನೋ– ಹಾಗೆಯೇ—"

"ಇಲ್ಲ. ನೀವು ಬಹಳ ಚೆನ್ನಾಗಿ ಪಾತ್ರವಹಿಸುತ್ತೀರಿ. ನಾನು, ಲಲಿತಾ ನಿಮ್ಮ ಒಂದು ನಾಟಕವನ್ನೂ ತಪ್ಪಿಲ್ಲ."

ಶ್ಯಾಮ್ ನಿಂತಲ್ಲಿಯೇ ಒಂದು ಕಾಲಿನಿಂದ ಇನ್ನೊಂದು ಕಾಲಿಗೆ ಭಾರ ಬದಲಾಯಿಸುತ್ತಿದ್ದ. ಹಾಗೆಯೇ ನಿಂತಿರಲು ಅವನಿಗೆ ಈಗ ಅಸಾಧ್ಯವಾಗಿತ್ತು ಮನಸ್ಸಿನ ಆಹ್ಲಾದವಲ್ಲಿ ಮೈ ತೂಗಾಡುತ್ತಿತ್ತು! ಲಲಿತಾ ನಾಚಿಕೆಯಿಂದ ಸೀರೆಯ ಸೆರಗನ್ನು ಕೈ ಬೆರಳಿನಲ್ಲಿ ತಿರುಚುತ್ತಾ ನಿಂತಿದ್ದಳು. ಆಗ ಅವಳು ಕಂಡಷ್ಟು ಸುಂದರವಾಗಿ ಮತ್ತೆಂದೂ ನನಗೆ ಕಂಡಿರಲಿಲ್ಲ. ಅಲ್ಲಲ್ಲಿ ನಕ್ಷತ್ರಮಾಲೆಯಿಟ್ಟಂತೆ ಬಿಳಿ ಜರತಾರಿಯಿದ್ದ ಕರಿಯ ತೆಳು ಸೀರೆಯುಟ್ಟಿದ್ದಳು. ಈ ತೆಳುಸೀರೆಯ ತುದಿಯಲ್ಲಿ ಒಳಲಂಗದ ಅಂಚಿನ ಕುಸುರಿ ಕಾಣುತ್ತಿತ್ತು. ಸ್ವಲ್ಪ ಸರಿದುಕೊಂಡಿದ್ದ ಸೆರಗಿನ ಅಂಚಿನಿಂದ, ತೊಟ್ಟಿದ್ದ ಬಿಳಿರವಿಕೆ, ಮೋಡದ ಮರೆಯಿಂದಿಣುಕುವ ತುಂಬು ಚಂದ್ರನಂತೆ ಇಣುಕಿ ಕಾಣಿಸಿಕೊಳ್ಳುತ್ತಿತ್ತು. ಮಂಡಿ ಮುಟ್ಟುವ ಜಡೆ ಹಾವಿನಂತೆ ಅವಳ ಎದೆಯಮೇಲೆ ಹರಿದು ಡೊಂಕಾಗಿ ಕೆಳಗಿಳಿದಿತ್ತು. ಮಲ್ಲಿಗೆಯ ಹೂವಿನ ಕುಚ್ಚು ಕೆಳಗಿಳಿದು ಹೀಗೂ ಹಾಗೂ ತೂರಾಡುತ್ತಿತ್ತು. ಲಲಿತೆಯ ಮುಖದಲ್ಲೊಂದುಬಗೆಯ ಶೋಭೆ, ಕಣ್ಣಿನಲ್ಲೊಂದು ಹೊಸ ಕಾಂತಿ ಸೂಸುತ್ತಿತ್ತು. ಅರೆತೆರದ ಗುಲಾಬಿಯ ದಳ ಬಿರಿಯಲೋ ಬೇಡವೋ ಎಂದು ಹಾಗೆಯೇ ನಿಂತಹಾಗೆ ತುಟಿ ತೋರಿಯೂ ತೋರದ ನಗೆ ಬೀರುತ್ತಿತ್ತು. ನನಗಂತೂ ಮನಸ್ಸು ಕಲಕಿಹೋಯಿತು. ಹೃದಯದ ಅಲ್ಲೋಲಕಲ್ಲೋಲದಲ್ಲಿ ಒಂದು ಆಸೆ ರೂಪುಗೊಂಡಿತು. ಒಂದರೆನಿಮಿಷ ಮೈಮರೆತ ನಾನು ಕಣ್ಣು ತೆರೆದಾಗ, ಲಲಿತಾ ಶ್ಯಾಮ್ ಇಬ್ಬರೂ ಕದ್ದು ಕದ್ದು ಒಬ್ಬರಕಡೆಗೊಬ್ಬರು ನೋಡಿದುದು ಕಾಣಿಸಿತು. ನನ್ನ ಹಗಲುಗನಸಿನ ಅಮೃತಕ್ಕೆ ಹಾಲಾಹಲ ತಂದಿಕ್ಕಿದಂತಾಯ್ತು!

ಆದಿನ ನಾನು ಪಟ್ಟ ಒದ್ದಾಟ ಹೇಳುವುದು ಕಷ್ಟ. ಶ್ಯಾಮನಲ್ಲಿ ನನಗಿದ್ದ ಪ್ರೇಮ ಕೂಡ ನನ್ನನ್ನು ಆದಿನ ಸಮಾಧಾನಗೊಳಿಸಲಿಲ್ಲ. ರೈಲು ಹೊರಡುವ ಮೊದಲಿನ ಕಳ್ಳನೋಟ, ರೈಲು ಹೊರಟಾಗ ನಟ್ಟನೋಟ, ನಮಸ್ಕಾರ ಇವೆಲ್ಲ ನನ್ನ ಮನಸ್ಸನ್ನು ಪೂರ್ತಿ ಕಲಕಿದವು. ಲಲಿತಾ

ಕೊನೆಯಲ್ಲಿ ತನ್ನ ಕರವಸ್ತ್ರ ಬೀಸಿದುದು ಶ್ಯಾಮನಿಗಾಗಿಯೇ ಎಂದು ನನ್ನ ದೃಢನಂಬಿಕೆ. ನಿಲ್ದಾಣದಿಂದ ಮನೆಗೆ ಹಿಂತಿರುಗುವಾಗ ಶ್ಯಾಮ್ ಬಹಳ ಉತ್ಸಾಹದಿಂದ ಮಾತಾಡಿದ. ನಾನು ಮಾತನ್ನೇ ಆಡದೆ ಸಪ್ಪೆಮೋರೆ ಹಾಕಿಕೊಂಡು ಬಂದೆ. ನಾನು ಸಪ್ಪೆಮೋರೆ ಹಾಕಿಕೊಂಡರೂ ಅದನ್ನು ಅವನು ಗಮನಿಸಲೇ ಇಲ್ಲ. ತನ್ನಷ್ಟಕ್ಕೆತಾನು ಆಹ್ಲಾದದಿಂದ ಮಾತಾಡುತ್ತಿದ್ದ. ಯಮುನೆಯನ್ನೂ ಲಲಿತಳನ್ನೂ ಬಾಯಿತುಂಬ ಹೊಗಳುತ್ತಿದ್ದ. ಅವನ ಈ ಹೊಗಳಿಕೆಯ ಮಾತಿನಿಂದ ನನಗೆ ಎಂದಿನಂತೆ ಸಂತೋಷವಾಗಲಿಲ್ಲ. ಪ್ರತಿಮಾತೂ ಮುಳ್ಳಿನಂತೆ ನನ್ನನ್ನು ಚುಚ್ಚುತ್ತಿತ್ತು. ಆದರೆ ಅದು ಅವನಿಗೆ ತಿಳಿಯದು.

ನಾನು ಮನೆಗೆ ಬಂದು ಹಾಸಿಗೆಯ ಮೇಲೆ ಬಿದ್ದುಗೊಂಡು ಒಂದೇ ಸಮನಾಗಿ ಯೋಚನೆ ಮಾಡಹತ್ತಿದೆ. ಶ್ಯಾಮ್ ನನಗೆ ಬಹಳ ಬೇಕಾದವನು. ಆದರೆ ಲಲಿತೆ ಅವನನ್ನು ಹಾಗೇಕೆ ನೋಡುತ್ತಿದ್ದಳು. ಅವನೂ ಅವಳ ಕಡೆಗೇ ನೋಡುತ್ತಿದ್ದನಲ್ಲಾ! ಅಂದಮೇಲೆ ಪ್ರೇಮ? ಸಿನಿಮಾಗಳನ್ನು ಅದರಲ್ಲಿಯೂ ಇಂಗ್ಲಿಷ್ ಚಿತ್ರಗಳನ್ನು ನೋಡಿದ್ದ ನನಗೆ ಅದು ಪ್ರೇಮದ ಪ್ರಾರಂಭವೆಂದೇ ತೋರಿತು. ನಾನು ನೋಡಿದ ಚಿತ್ರಗಳಲ್ಲೆಲ್ಲಾ ಪ್ರೇಮಿಗಳು ಅದೇ ರೀತಿಯಲ್ಲಿ ಓರೆಗಣ್ಣಿನ ಕಳ್ಳನೋಟ ಬೀರಿದ್ದರು. ಆದರೆ ಲಲಿತಾ, ಶ್ಯಾಮ್ ಹಾಗೆಂದು ನಂಬಲು ನನಗಿಷ್ಟವಿಲ್ಲ. ನನ್ನ ಕಣ್ಣೇ ತಪ್ಪುತಿಳಿದುಕೊಂಡಿದೆಯೆಂದು ಸಮಾಧಾನ ಪಟ್ಟುಕೊಳ್ಳಲು ಯತ್ನಿಸಿದೆ. ಆದರೆ ಅದು ಸಾಧ್ಯವಿಲ್ಲ. ಪದೇ ಪದೇ ಅದೇ ಅನುಮಾನ ಬರುತ್ತಿತ್ತು. ಒಂದೊಂದು ಬಾರಿ ಬೇರೆ ರೀತಿಯಲ್ಲಿಯೂ ಮನಸ್ಸು ಓಡುತ್ತಿತ್ತು. ಲಲಿತೆಗೆ ಶ್ಯಾಮನಲ್ಲಿ ಒಂದು ಬಗೆಯ ಹೊಸತನ ಕಂಡಿರಬೇಕು. ಅದು ಸಹಜವೇ. ಅವನು ಕಲೋಪಾಸಕ, ಕಲಾವಿದ. ಕಲಾವಿದರು, ಕವಿಗಳು, ನಟರು, ಸಂಗೀತಗಾರರು ಇವರೆಲ್ಲರ ಸುತ್ತ ಒಂದು ಶೃಂಗಾರವಲಯ ವಿರುತ್ತದೆ. ಈ ವಲಯದ ಮೋಹ ಹೆಂಗಸರಲ್ಲಿ ಬಹಳ. ಆದಕ್ಕೇ ಕಲೆಗಾರರೆಂದರೆ ಹೆಂಗಸರು, ಅದರಲ್ಲಿಯೂ ಹರಯದ ಹೆಣ್ಣುಗಳು ಮಧುರಗೊಳ್ಳುವುದು. ಆದರೆ ಈ ಮಧುರಮೋಹ ಬಹುದಿನ ಉಳಿಯಲಾರದು. ಲಲಿತೆಗೂ ಶ್ಯಾಮನ ಕಲೆಗಾರಿಕೆಯ ಮೋಹವೆಂದು

ಕೊಳ್ಳಲು ಯತ್ನಿಸಿದೆ. ಆದರೆ ಅವನು ಅವಳನ್ನು ಹಾಗೆ ನೋಡಿದುದು. ದಾರಿಯಲ್ಲಿ ಅವಳನ್ನು ಹೊಗಳಿದುದು. ಅದಕ್ಕೇನು ಹೇಳುವುದು ? ಎಲ್ಲ ಗಂಡಸರೂ ನೋಡುವಂತೆ ಅವನೂ ನೋಡಿದ. ಅದರಲ್ಲೇನೂ ಹೆಚ್ಚಿಲ್ಲ. ನಾನು ಅವರನ್ನು ಅವನ ಬಳಿ ಬೇಕಾದಂತೆ ಹೊಗಳಿರಲಿಲ್ಲವೇ ? ಈಗ ಅವನು ಹೊಗಳಿದರೆ ಅದರಲ್ಲೇನು ತಪ್ಪು ಎಂದು ಸಮಾಧಾನ ಹೇಳಿಕೊಂಡೆ ಆದರೂ ಆ ದಿನದ ಘಟನೆ ನನ್ನ ಮನಸ್ಸಿಗೆ ವಿಪರೀತ ಬೇಸರ ತಂದಿತು.

ಸಂಜೆ ಶ್ಯಾಮುನೊಂದಿಗೆ ಚಿತ್ರ ನೋಡಲು ಹೊರಟಾಗಕೂಡ ಬೇಸರದ ಕುದಿ ಅಷ್ಟೊಂದು ಇಳಿದಿರಲಿಲ್ಲ. ಇನ್ನೂ ಅವನ ಮೇಲಿನ ಅಸೂಯೆ ಹಾಗೆಯೇ ಇತ್ತು. ಅದರಿಂದ ನಾನು ಅಷ್ಟೊಂದು ಮಾತಾಡಲಿಲ್ಲ. ಕೇಳಿದ್ದಕ್ಕೆಲ್ಲಾ 'ಹುಂ' 'ಉಹೂಂ' ಎಂದಷ್ಟರಲ್ಲೇ ಮುಗಿಸಿದೆ. ಅವನು ಅದನ್ನು ಲೆಕ್ಕಿಸದೆ, ಹೊಸದಾಗಿ ಆಟದಸಾಮಾನು ಸಿಕ್ಕಿದ ಹಿಗ್ಗಿನಲ್ಲಿ ಮಗು ಆಡುವಂತೆ, ಒಂದೇ ಸಮನಾಗಿ ಮಾತನಾಡುತ್ತಿದ್ದ. ಒಂದೆರಡು ಸಾರಿ ನನ್ನ ಮಾತಿಲ್ಲದ ನಡತೆ ಅವನಿಗೆ ಸರಿಬೀಳಲಿಲ್ಲ. ಬಾಯಿಬಿಟ್ಟು ಕೇಳಿದ "ಯಾಕೋ ಹೀಗಿದ್ದೀ?" ಎಂದ. ನಾನು ಹೇಗೆ ಹೇಳುವುದು ? "ಏನೂ ಇಲ್ಲ" ಅಂದೆ. ತನಗೆ ಈ ಸಪ್ಪೆತನದ ಕಾರಣ ತಿಳಿದವನಂತೆ ಅವನೇ ಸಮಾಧಾನ ಹೇಳಲಾರಂಭಿಸಿದ. "ನೋಡು, ಸೀನು. ರಜಾ ಎರಡುತಿಂಗಳು ಕಳೆದ ಮೇಲೆ ಇಬ್ಬರೂ ಹಿಂದಿರುಗಿ ಬರುತ್ತಾರೆ. ಆಮೇಲೆ ಮೊದಲಿನಂತೆಯೇ ಇರಬಹುದು ಹೀಗೆ ನೀನು ಅಳುಮೋರೆಹಾಕಿಕೊಂಡು. ಕುಳಿತರಾಯಿತೇ ?" ಎಂದು ಸಮಾಧಾನಮಾಡಲು ಪ್ರಯತ್ನಿಸಿದ. ಅವನ ಮುಖದಲ್ಲೇನೋ ಗಾಂಭೀರ್ಯವಿತ್ತು. ಮನಸ್ಸಿನಲ್ಲೇನಿತ್ತೋ— ನನಗಂತೂ ಆಗ ತಿಳಿಯಲಿಲ್ಲ. ಎಷ್ಟಿದ್ದರೂ ನಟ !

ಮೂರು ನಾಲ್ಕು ದಿನಕ್ಕೇ ಶ್ಯಾಮುನೂ ಊರಿಗೆ ಹೊರಟುಬಿಟ್ಟ. ಆ ದಿನವಂತೂ ನನ್ನ ಎದೆ ಕಿವುಚಿದಂತಾಗಿಹೋಗಿತ್ತು. ಆದರೆ ವಿಧಿಯಿಲ್ಲ. ರಜೆ ಬಂದು ಒಂದುವಾರವಾಗಿತ್ತು. ಊರಿನಲ್ಲಿ ತಂದೆಯೊಬ್ಬರೇ. ರಜೆಗಾದರೂ ಸಂಸಾರ ಊರಿಗೆ ಸಾಗಬೇಕಾಗಿತ್ತು. ಆಗ ಸೀತಾರಾಮು ವೊಬ್ಬನೇ ಮೈಸೂರಿನಲ್ಲಿ ಹೋಟಲಿನಲ್ಲಿ ಊಟಮಾಡಿಕೊಂಡಿರುತ್ತಿದ್ದ. ಅಂತೂ ಶ್ಯಾಮು ಊರಿಗೆ ಹೊರಡುವ ತೀರ್ಮಾನವಾಗಿತ್ತು.

ಹೊರಡುವ ಮೊದಲದಿನ ಶ್ಯಾಮ್ ನನ್ನನ್ನು ಅವರ ಮನೆಗೆ ಊಟಕ್ಕೆ ಕರೆದಿದ್ದ. ನನ್ನ ಮನಸ್ಸಿನ ಅಸಮಾಧಾನ ಕೊಂಚ ಕೊಂಚ ಉಳಿದಿತ್ತು. ಆದರೆ ಈಗ ಶ್ಯಾಮ್ ಹೊರಟುಹೋಗುವನೆನ್ನುವ ಅಸಮಾಧಾನದಲ್ಲಿ ಅದು ಸಣ್ಣಗಾಗಿ ಬೆರೆತುಹೋಯಿತು. ಅವನ ಮನೆಗೆ ಊಟಕ್ಕೆ ಹೋಗಲೇ ಬೇಡವೇ ಎಂದು ಒಂದು ಬಾರಿ ಯೋಚಿಸಿಯೂ ಯೋಚಿಸಿದೆ. ಆದರೆ ಹೋಗದಿರುವಷ್ಟು ಮನಸ್ಸಿನ ಶಕ್ತಿ ನನಗೆಲ್ಲಿ ಬಂದೀತು? ಶ್ಯಾಮನ ಗೆಳೆತನದ ಹಿಡಿತ, ಜತೆಗೆ ಲಕ್ಷ್ಮಿಯನ್ನು ಕಾಣುವ ಬಯಕೆ ಇವುಗಳು ನನ್ನನ್ನು ಮೃದುಮಾಡಿಬಿಟ್ಟುವು.

ಹನ್ನೆರಡು ಗಂಟೆಗೆ ಊಟ. ಬೆಳಗಿನಿಂದಲೂ ಒಂದೇಸಮನೆ ಅದರ ಬಗ್ಗೆಯೇ ನನ್ನ ಯೋಚನೆ. ಕಾಲ ಬಹುಮೆಲ್ಲಗೆ ಸಾಗುತ್ತಿದೆಯೆಂದು ನನಗೆ ಅವತ್ತು ಅನ್ನಿಸಿತು. ೧೦ ಗಂಟೆಯ ಹೊತ್ತಿಗೆ ಪುಸ್ತಕ ಭಂಡಾರದ ಯಾವುದೋ ಪುಸ್ತಕವನ್ನು ವಾಪಸುಮಾಡಬೇಕೆಂದು ನೆನಪಾಯಿತು. ಆ ಪುಸ್ತಕ ಶ್ಯಾಮನ ಮನೆಯಲ್ಲಿತ್ತು. ಆದಿನ ಹನ್ನೆರಡುಗಂಟೆಯೊಳಗಾಗಿ ವಾಪಸು ಕೊಡದಿದ್ದರೆ ಅನ್ಯಾಯವಾಗಿ ದಂಡ ತೆರಬೇಕಾಗಿತ್ತು. ಅದಕ್ಕೋಸ್ಕರ ಶ್ಯಾಮನ ಮನೆಗೆ ಓಡಿದೆ. ಬೀದಿಯ ಬಾಗಿಲು ತೆರೆದಿತ್ತು. ಶ್ಯಾಮನ ಕೋಣೆಯ ಬಾಗಿಲೂ ತೆರೆದಿತ್ತು. ಕೂಗುವುದೇನು ಎಂದುಕೊಂಡು ನೇರವಾಗಿ ಒಳಗೆ ಕಾಲಿಟ್ಟೆ. ನಾನು ಒಳಗೆ ಕಾಲಿಡುವ ವೇಳೆಗೂ ಲಕ್ಷ್ಮಿ ಹೊರಗೆ ಹೊರಡುವ ವೇಳೆಗೂ ಸರಿಹೋಯಿತು. ಅವಸರದಿಂದ ಮುಂದೆ ಬಂದವಳು ಹಿಮ್ಮೆಟ್ಟಲು ಯತ್ನಿಸಿ ಜಾರಿದಳು. ಯಾಕೋ ಏನೋ ಅವಳು ಬೀಳದಂತೆ ತಡೆಯಲು ನನ್ನಿಂದ ಆಗಲಿಲ್ಲ. ಲಕ್ಷ್ಮಿಯ ಹಣೆಯಮೇಲೆ ಬೆವರಿನ ಹನಿ ಸಾಲುಮುತ್ತಿನಂತೆ ತೋರಿತು. ಕುಂಕುಮದ ಚಮಕಿ ಬಾಸಿಂಗದಂತೆ ಹೊಳೆಯಿತು. ಸೀಲಿಯ ಜರತಾರಿ ಲಂಗ, ಗುಲಾಬಿಯ ಜಂಪರ್ ಪ್ರಾಕು ತೊಟ್ಟಿದ್ದಳು. ಕತ್ತಿನಲ್ಲೊಂದು ಚಿನ್ನದಸರ ಮಿನುಗುತ್ತಿತ್ತು. ನಾನು ಅಲ್ಲೇ ಕಣ್ಣುಕುಕ್ಕಿದಂತೆ ನಿಂತೆ. ಲಕ್ಷ್ಮಿ ಆವಸರವಸರವಾಗಿ ಎದ್ದುನಿಂತು ನಾಚಿಕೆಯಿಂದ ತಲೆತಗ್ಗಿಸಿ ನಿಂತಳು. ಅವಳ ಮೈ ನಡುಗುತ್ತಿತ್ತು.

''ಶ್ಯಾಮ್ ಇಲ್ಲವೇ ?''

''ಶಾಮುಸುಂದ್ರು ಇಲ್ಲ. ಅಂಗಡಿಗೆ ಹೋದವನು ಇನ್ನೂ ಬಂದಿಲ್ಲ''

''ನನ್ನದೊಂದು ಪುಸ್ತಕ ಇಲ್ಲಿದೆ, ತೆಗೆದುಕೊಂಡು ಹೋಗುತ್ತೇನೆ''

"ತೆಗೆದುಕೊಳ್ಳಿ"

ನಾನು ಪುಸ್ತಕ ತೆಗೆದುಕೊಳ್ಳಲು ಮುಂದೆ ಸರಿದುದೇ ತಡ, ಲಕ್ಷ್ಮಿ ಕೋಣೆಯಿಂದ ಮಾಯವಾದಳು. ಆದರೂ ಅವಳಲ್ಲಿದ್ದುದರ ಕುರುಹಾಗಿ ಏನೋ ಒಂದು ಮಾಯೆಯ ಸುಗಂಧ ಕೋಣೆಯಲ್ಲಿ ತುಂಬಿಕೊಂಡಿತ್ತು! ಒಬ್ಬ ಸುಂದರ ಹೆಣ್ಣನ್ನು ನೋಡಿದಾಗ ಉಳಿದವರೆಲ್ಲಾ ಮರೆತು ಹೋಗುವುದು ನನಗೆ ಸಾಮಾನ್ಯ, ಸಹಜ. ಆದರೆ ಆದಿನ ಮಾತ್ರ ನನ್ನ ಮನಸ್ಸು ವಿಚಿತ್ರವಾಯಿತು. ಲಕ್ಷ್ಮಿಯನ್ನು ನೋಡಿದಾಗಿನಿಂದ ಲಲಿತೆಯ ನೆನಪು ಜೋರಾಯಿತು. ಲಲಿತೆ ಆ ದಿನ ರೈಲುಹತ್ತುವ ಮೊದಲು ನಿಂತ ಸುಂದರ ನಿಲುವು, ಅವಳ ವೈಯಾರದ ಕುಲುಕು, ಚೆಲುವಿನ ನೋಟ ಎಲ್ಲಾ ಒಂದೊಂದಾಗಿ ನೆನಪಿನಲ್ಲಿ ಎದ್ದು ನಿಂತುವು ಲಕ್ಷ್ಮಿಯ ಮುಖ ಮಾಸಿಹೋಗಿ ಲಲಿತೆಯ ಮುಖ ಮೂಡಲಾರಂಭಿಸಿತು. ಲಕ್ಷ್ಮಿಯ ಮುಖದ ಮೇಲೆ ಕಂಡ ಬೆವರುಹನಿಯ ಮಾಲೆ, ಚಮಕಿಯ ಕುಂಕುಮದ ಬಾಸಿಂಗ ಈಗ ಲಲಿತೆಯ ಮುಖಕ್ಕೆ ಮೆರಗು ಕೊಡುತ್ತಿತ್ತು. ಮನೆಗೆ ಹಿಂತಿರುಗುತ್ತಾ ದಾರಿಯುದ್ದಲ್ಲೆಲ್ಲಾ ಅದೇ ಯೋಚನೆ. ಅವಳದೇ ಚಿತ್ರ. ಲಲಿತೆಯ ನೆನಪಾದಂತೆ ಮತ್ತೆ ಅಂದಿನ ಗಾಯ ಬೆದಕಿದಂತಾಯ್ತು. ಅನುಮಾನದ ಭೂತ ಮತ್ತೆ ಬೆಳೆಯಲಾರಂಭಿಸಿತು. ಆದರೆ ಲಲಿತೆಯ ಚಿತ್ರದ ಮುಂದೆ ಈ ಅನುಮಾನ ಬಹುಹೊತ್ತು ಸ್ಥಿರವಾಗಿ ನಿಲ್ಲುತ್ತಿರಲಿಲ್ಲ. ಒಮ್ಮೆ ಕರಗಿ ಮತ್ತೆ ಪುನಃ ಚೇತನಗೊಂಡು ರೂಪುಗೊಳ್ಳುತ್ತಿತ್ತು. ಮತ್ತೆ ಕರಗುತ್ತಿತ್ತು.

ಲಲಿತೆಯಲ್ಲೇ ಆಸಕ್ತಿಗೊಂಡ ನನ್ನ ಮನಸ್ಸಿಗೆ ಮತ್ತೇನೂ ಬೇಕಿರಲಿಲ್ಲ. ಏನೋ ಹೇಳಲಾರದ ಕೊರತೆ ಬಂದು ಹೃದಯದಲ್ಲಿ ಮನೆಮಾಡಿಕೊಂಡಿತು. ಊಟಕ್ಕೆ ಕುಳಿತಾಗ ಶ್ಯಾಮನೊಂದಿಗಾಗಲಿ, ಅವರ ತಾಯಿಯೊಂದಿಗೇ ಆಗಲಿ ಸರಿಯಾಗಿ ಮಾತನಾಡಲಿಲ್ಲ. ಹೃದಯ ಬೇರೆಯವರಿಗೆ ಮುಚ್ಚಿದಂತಾಗಿಹೋಗಿತ್ತು. ನನ್ನ ಈ ನಡತೆಯಿಂದ ಶ್ಯಾಮನಿಗೆ ಅಸಮಾಧಾನವಾಯಿತು. ಅವನು ಅದನ್ನು ಹೇಳಿಯೂಬಿಟ್ಟ. ಆದರೆ ನನ್ನ ಮನಸ್ಸು ನನ್ನ ಹಿಡಿತದಲ್ಲಿರಲಿಲ್ಲ! ಎದುರಿಗೇ ಕುಳಿತು ಊಟ ಮಾಡುತ್ತಿದ್ದ ಲಕ್ಷ್ಮಿ ಕೂಡ ನನ್ನ ಕಣ್ಣಿಗೆ ಕಾಣುತ್ತಿರಲಿಲ್ಲ. ಊಟ ಮಾತ್ರ. ಮಾಡುತ್ತಿದ್ದೆ, ಯಾಂತ್ರಿಕವಾಗಿ! ಒಂದೊಂದು ಪ್ರಶ್ನೆಗೆ ಉತ್ತರವನ್ನೂ ಕೊಡುತ್ತಿದ್ದೆ, ಅಸಂಬದ್ಧವಾಗಿ!

## 2

ರಜೆ ಬಂದುದೇನೋ ಆಯಿತು. ಆದರೆ ರಜೆಯ ದಿನಗಳನ್ನು ಕಳೆಯುವುದು ಮಾತ್ರ ಬಹಳ ಕಠಿಣವಾಯಿತು. ದಿನವೂ ಬೆಳಗ್ಗೆ ಹೊತ್ತಾಗಿ ಏಳುತ್ತಿದ್ದೆ. ಸ್ನಾನ. ಊಟ ಎಲ್ಲಾ ಕೆಲಸವನ್ನೂ ನಿಧಾನವಾಗಿ ಮಾಡುತ್ತಿದ್ದೆ. ಆದರೂ ಹೊತ್ತು ಕಳೆಯುವುದು ಮಾತ್ರ ಬಹಳ ಕಷ್ಟವಾಗಿತ್ತು. ಹೊತ್ತು ಹೇಗಾದರೂ ಸರಿ ಸಾಗಿದರೆ ಸಾಕೆಂದು ಬೆಳಗ್ಗೆಯೆನ್ನದೆ ಸಂಜೆಯೆನ್ನದೆ ಅಲೆಯುತ್ತಿದ್ದೆ. ಅದರಿಂದ ಏನೂ ಪ್ರಯೋಜನವಾಗಲಿಲ್ಲ. ಮನಸ್ಸಿನ ಬೇಸರ ಹೆಚ್ಚಾಗುತ್ತಾ ಬಂತು. ರಾತ್ರಿ ಊಟಮಾಡಿದಮೇಲೆ 'ಹಿಂದೂ' ಪತ್ರಿಕೆಯನ್ನು ಆಮೂಲಾಗ್ರವಾಗಿ, ಕೊನೆಗೆ ಅಚ್ಚುಮಾಡಿದವರ ಹೆಸರು ಪೂರ್ತಿ ಓದುತ್ತಿದ್ದೆ. ಆದರೂ ಬೇಸರ ಮಾತ್ರ ಕಳೆಯುತ್ತಿರಲಿಲ್ಲ ಮನಸ್ಸಿಗೆ ಹೀಗೆ ಬೇಸರವಾದಾಗ ಒಳಗಿರುವ ಕೆಲವು ಯೋಚನೆಗಳು ತಾವೇತಾವಾಗಿ ಹೊರಬೀಳುತ್ತವೆ. ಹಾಸಿಗೆಯಮೇಲೆ ಬಿದ್ದುಗೊಂಡು, ನಿದ್ರೆ ಬಾರದೆ ಹಾಗಿಂದ ಹೀಗೆ ಹೊರಳುವಾಗ ಇದ್ದಕ್ಕಿದ್ದಂತೆ ಶ್ಯಾಮನ ಯೋಚನೆ ಬರುತ್ತಿತ್ತು. ಅವನು ಊರಿಗೆ ಹೋದವನು ಒಂದು ವಾರವಾದರೂ ಕಾಗದವನ್ನೇ ಬರೆದಿಲ್ಲವಲ್ಲ? ಯಾಕೆ ಕಾಗದ ಬರೆಯಲಿಲ್ಲ? ಕೊನೆಯದಿನ ನಾನು ಅವನೊಂದಿಗೆ ನಿರಾಸಕ್ತಿಯ ನಡತೆ ತೋರಿದೆನೆಂದೇನಾದರೂ ಅವನಿಗೆ ನನ್ನ ಮೇಲೆ ಕೋಪವೇ? ಇರಲಾರದು ಎಂದು ನಾನೇ ಸಮಾಧಾನ ಮಾಡಿಕೊಳ್ಳುತ್ತಿದ್ದೆ. ಖಂಡಿತವಾಗಿಯೂ ನಾಳೆಯದಿನ ಕಾಗದ ಬಂದೇ ತೀರುವುದೆಂದು ನನಗೆ ನಾನೇ ಹೇಳಿಕೊಳ್ಳುತ್ತಿದ್ದೆ. ಕಾಗದ ಹೇಗಿರಬಹುದು, ಏನೇನು ಬರೆದಿರಬಹುದು ಎಂದೆಲ್ಲ ಯೋಚನೆ. ಒಂದೆರಡು ನಿಮಿಷದಲ್ಲೇ ಮನಸ್ಸು ಅಲ್ಲಿಂದ ಹಾಸನಕ್ಕೆ ಹರಿಯುತ್ತಿತ್ತು. ಯಮುನಾ, ಲಲಿತಾ—ಇಬ್ಬರೂ ಈಗ ಹಾಸನದಲ್ಲಿದ್ದಾರೆ. ಯಮುನೆಯೇನೋ ಕಾಗದ ಬರೆಯುತ್ತೇನೆಂದು ಹೇಳಿದ್ದಳು. ಆದರೆ ಅವಳ ಮಾತು ನಂಬುವುದು ಮಾತ್ರ ಕಷ್ಟ. ಲಲಿತೆಯಂತೂ ಕಾಗದ ಬರೆಯುತ್ತಲೂ ಇರಲಿಲ್ಲ. ಕಾಗದ ಬರೆಯುವಳೆಂಬ ಆಸೆಯೂ ನನಗಿರಲಿಲ್ಲ. ಆದರೂ ನನಗೆ ಅರಿವಿಲ್ಲದೆಯೇ ನನ್ನ ಮನಸ್ಸು ಲಲಿತೆಯ ಮಾತೆತ್ತಿದೊಡನೆಯೇ ಆಹ್ಲಾದಗೊಳ್ಳುತ್ತಿತ್ತು. ಅರಳುತ್ತಿತ್ತು.

ಯಾವುವೋ ಬಗೆಯ ಅಸ್ಪಷ್ಟ ಕನಸುಗಳು ಬಣ್ಣಬಣ್ಣದ ರೂಪ ತಾಳಿ, ಕಣ್ಣಮುಂದಿನ ಕತ್ತಲಿನಲ್ಲಿ ಕುಣಿಯುತ್ತಿದ್ದುವು. ಈ ಸುಂದರ ಬಾನುಬಿಲ್ಲಿನ ಬಣ್ಣದ ಕನಸುಗಳಿಗೆಲ್ಲ ಲಲಿತೆಯೇ ಮಧುರಸ್ಫೂರ್ತಿ. ಅವಳೆಂದರೇ ಹೃದಯದಲ್ಲೊಂದು ಬಗೆಯ ನಾದ ಮಿಡಿಯುತ್ತಿತ್ತು. ಯಮುನಾ, ಶ್ಯಾಮ್ ಎಲ್ಲರೂ ಮರೆತುಹೋಗಿ, ಹೇಳಲಾರದ, ತಾಳಲಾರದ ಸವಿನೋವು ನನ್ನನ್ನು ರಾತ್ರಿಯ ಬಹುಭಾಗ ಎಚ್ಚರದಲ್ಲಿರಿಸುತ್ತಿತ್ತು.

ಶ್ಯಾಮ್ ಊರಿಗೆ ಹೋದ ಹತ್ತುದಿನದ ಅನಂತರ ಕಾಗದ ಬರೆದ. ಎಲ್ಲ ಸ್ನೇಹಿತರೂ ಒಬ್ಬರಿಗೊಬ್ಬರು ಬರೆಯುವ ಕಾಗದ ಅದು. ತಾನಿಷ್ಟು ದಿನವೂ ಕಾಗದ ಬರೆಯದೆ ತಡಮಾಡಲು ಕಾರಣ ತನ್ನ ಮೈಕೆಟ್ಟಿದೆಂತಲೂ, ಈಗ ವಾಸಿಯೆಂತಲೂ ಬರೆದಿದ್ದ. ಪುರುಸೊತ್ತು ಮಾಡಿಕೊಂಡು ಊರಿಗೊಂದುಬಾರಿ ಬಾರೆಂದು ಕರೆದಿದ್ದ. ತಕ್ಷಣವೇ ಇದಕ್ಕೆ ಉತ್ತರ ಬರೆಯಬೇಕೆಂದು ಕೊನೆಯಲ್ಲಿ ಅಪ್ಪಣೆಮಾಡಿದ್ದ. ನಾನು ರಜೆಯಲ್ಲಿ ಓದಬೇಕೆಂದಿರುವ ಪುಸ್ತಕಗಳು, ಮಾಡಬೇಕೆಂದಿರುವ ಕೆಲಸಗಳು ಇವುಗಳನ್ನೆಲ್ಲ ಪಟ್ಟಿಮಾಡಿ, ಅವರಿವರ ವಿಷಯ, ಚಲನಚಿತ್ರಗಳ ವಿಷಯ ಎಲ್ಲಾ ಕೂಡಿಸಿ ನಾನೂ ಉತ್ತರ ಬರೆದೆ.

ಮತ್ತೆ ಏಳೆಂಟು ದಿನಗಳಲ್ಲೇ ಶ್ಯಾಮನಿಂದ ಇನ್ನೊಂದು ಕಾಗದ ಬಂತು. ಲಕ್ಷ್ಮಿಗೆ ಮದುವೆ ಗೊತ್ತುಮಾಡಲು ತಂದೆಯ ಜತೆಯಲ್ಲಿ ತಾನೂ ಹಾಸನಕ್ಕೆ ಹೋಗಿದ್ದೆನೆಂದು ಬರೆದಿದ್ದ. ಲಕ್ಷ್ಮಿಯನ್ನು ಗಂಡಿನ ಕಡೆಯವರಿಗೆ ತೋರಿಸಿಯಾಗಿತ್ತು. ಅವರ ಒಪ್ಪಿಗೆಯೂ ಸಿಕ್ಕಿತ್ತು. ಮದುವೆ ಇನ್ನೊಂದು ವಾರದೊಳಗೆ ಆಗಬೇಕೆಂದೂ ತೀರ್ಮಾನವಾಗಿತ್ತು. ಮದುವೆ ಹಾಸನದಲ್ಲೇ ಆಗುತ್ತಿತ್ತು. ವರ ಹಾಸನದಲ್ಲಿ ಆದೇತಾನೇ ವಕೀಲಿಯನ್ನಾರಂಭಿಸಿದ್ದನಂತೆ. ನೋಡಲು ಅಷ್ಟೇನೂ ಸುರೂಪಿಯಲ್ಲದಿದ್ದರೂ ಪರವಾಗಿಲ್ಲ. ಹುಡುಗ ಬುದ್ಧಿವಂತನೆಂದು ಎಲ್ಲರಿಂದಲೂ ಹೊಗಳಿಸಿಕೊಂಡಿದ್ದನಂತೆ. ಜತೆಗೆ ಬೇಕಾದಷ್ಟು ಆಸ್ತಿಯೂ ಇತ್ತು. ಹಣಕ್ಕೆ ಹಣ ಮದುವೆಯಾಗುವುದೇ ಸಾಮಾನ್ಯ ತಾನೇ! ಮದುವೆಗೆ ನನ್ನನ್ನು ಬರಹೇಳಿ ಬರೆದಿದ್ದ. ಮದುವೆಯ ಮುನ್ನಾದಿನವೇ ಬಂದು ಮದುವೆ ಪೂರ್ತಿ ಅಲ್ಲಿರಬೇಕೆಂದು ಅವನ ಒತ್ತಾಯ. ನನಗೂ ಅಲ್ಲಿಗೆ

ಹೋಗಲು ಸಂತೋಷವೇ! ನನ್ನ ಎಂದಿನ ರೀತಿಯಂತೆ ಲಕ್ಷ್ಮಿಗೆ ಮದುವೆಯೆಂದೊಡನೆ ಮನಸ್ಸಿಗೆ ಕೊಂಚ ಕಸಿವಿಸಿಯಾಯಿತು. ಆದರೆ ಮೊದಲಿನಷ್ಟು ಅಸಮಾಧಾನವಾಗಲಿಲ್ಲ ಮದುವೆಯೆಂದರೆ ಮೊದಲಿನ ಹಾಗೆ ಕೋಪ ಬರುತ್ತಿರಲಿಲ್ಲ. ದುಃಖವೂ ಆಗುತ್ತಿರಲಿಲ್ಲ. ಹಾಸನಕ್ಕೆ ಹೋದರೆ ಯಮುನಾ, ಲಲಿತೆಯರನ್ನು ಕಾಣಬಹುದು ಎನ್ನುವ ಆಸೆಯೂ ಬಂತು. ಅಲ್ಲಿಗೆ ಹೋದರೆ ಅವರ ಮನೆಯಲ್ಲಿಯೇ ಇಳಿದುಕೊಳ್ಳಬಹುದೆಂದು ಅನಿಸಿತು. ಆ ಯೋಚನೆ ಬಂದೊಡನೆ ಯಾಕೋ ಮನಸ್ಸಿಗೆ ಭೀತಿ, ಹಿಂದೇಟು. ಅದು ಹಾಗೇ ಆಗಲೆಂದು ಆಸೆಯಾದರೂ, ಏನಾದರೂ ಅಚಾತುರ್ಯ ನನ್ನಿಂದ ಸಂಭವಿಸಿದರೆ ಎನ್ನುವ ಹೆದರಿಕೆ. ಇದೂ ಅಲ್ಲದೆ ಅವರ ಮನೆಯಲ್ಲಿರಲು ನಮ್ಮ ತಂದೆತಾಯಿ ಒಪ್ಪಬೇಕಲ್ಲ. ಹೋಗಲಿ ಅಲ್ಲಿಳಿದುಕೊಳ್ಳದಿದ್ದರೂ ಅವರನ್ನು ಕಾಣಲು ಆಗಾಗ ಹೋಗಿ ಬರಬಹುದಲ್ಲಾ ಎನ್ನುವ ಆಸೆಯೂ ಇತ್ತು. ಮರುದಿನವೇ ಯಮುನೆಗೊಂದು ಕಾಗದ ಬರೆದು ಹಾಕಿದೆ. ಶ್ಯಾಮನ ತಂಗಿ ಲಕ್ಷ್ಮಿಗೆ ಮದುವೆ. ಅದಕ್ಕಾಗಿ ಅಲ್ಲಿಗೆ ಬರುತ್ತೇನೆ. ಬಂದಾಗ ಮನೆಗೆ ಬರುತ್ತೇನೆಂದು ಬರೆದೆ. ಶ್ಯಾಮನಿಗೂ ಬರೆದೆ.

ನಾನು ಕಾಗದ ಹಾಕಿದ ಮಾರನೆಯ ದಿನವೇ ಯಮುನೆಯ ಕಾಗದ ಬಂತು. ಬಹಳ ಉದ್ದವಾದ ಕಾಗದ. ಹೇಳುವ ವಿಷಯವೇನೂ ಇಲ್ಲದಿದ್ದರೂ ಸುಮ್ಮನೆ ಹರಟೆ ಹೊಡೆಯುವಂತೆ ಏನೇನೋ ಬರೆದಿದ್ದಳು. "ಗಂಡ ಹೆಂಡತಿಯರೆಂದರೆ ಹೇಗೆನ್ನುವುದು ಗೊತ್ತಾಗುತ್ತದೆ. ಹಾಸನಕ್ಕೆ ಬಂದು ನೋಡು." ಎಂದು ಲಕ್ಷ್ಮಿಯ ಮದುವೆಯ ವಿಷಯಕ್ಕೆ ಬರೆದು ಮುಗಿಸಿದ್ದಳು. ಅವಳ ಕಾಗದ ಬಂದಾಗ ನಾನು ಮುಖಕ್ಷೌರ ಮಾಡಿಕೊಳ್ಳುತ್ತಾ ಕಿಟಕಿಯ ಬಳಿ ನಿಂತಿದ್ದೆ. ಕ್ಷೌರ ಮಾಡಿಕೊಳ್ಳುತ್ತಾ ಹಾಗೆಯೇ ಅದನ್ನೋದಿ ಅಲ್ಲಿಯೇ ಇಟ್ಟೆ. ಮಾರನೆಯ ದಿನವೇ ಹಾಸನಕ್ಕೆ ಹೊರಡುವ ತೀರ್ಮಾನ ಮಾಡಿದ್ದೆ. ಅದಕ್ಕೆ ಸಿದ್ಧತೆಗಳನ್ನೆಲ್ಲಾ ಮಾಡಿಕೊಳ್ಳುವ ಅವಸರದಲ್ಲಿ ಆ ಕಾಗದವನ್ನು ಅಲ್ಲಿಯೇ ಮರೆತೆ. ಕೋಣೆಗೆ ಬೀಗ ಹಾಕಿಕೊಂಡು ಹೊರಗಡೆಗೆ ಹೋಗಿ ಅಗಸನಿಂದ ಮಡಿ ಬಟ್ಟೆಗಳನ್ನು ತರುವುದು, ನಾಲ್ಕಾರು ದಿನ ಅಲ್ಲಿರಬೇಕಾದುದಕ್ಕೆ ತೆಗೆದುಕೊಳ್ಳ

ಬೇಕಾದ ಬಟ್ಟೆಗಳು ಮತ್ತು ಉಳಿದ ಸಾಮಾನುಗಳನ್ನು ಸಿದ್ಧಪಡಿಸಿ ಕೊಳ್ಳುವುದು, ಮುಂತಾದ ಸಿದ್ಧತೆಗಳಲ್ಲಿ ನನಗೆ ಮಧ್ಯಾಹ್ನದ ತನಕ ಆಕಡೆಗೆ ಗಮನವೇ ಹೋಗಲಿಲ್ಲ. ಮಧ್ಯಾಹ್ನ ಪೋಸ್ಟ್ ಬರುವ ಹೊತ್ತು ಆದಾಗ ನೆನಪಾಯಿತು. ಎಲ್ಲಿಟ್ಟೆನೆಂದು ಎಲ್ಲೆಲ್ಲೂ ಹುಡುಕಿದೆ. ಆದರೆ ಎಲ್ಲೂ ಸಿಗಲಿಲ್ಲ. ಕ್ಷೌರ ಮಾಡಿಕೊಳ್ಳುವಾಗ ಓದಿದ ನೆನಪಿತ್ತು. ಆದರೆ ಓದಿದಮೇಲೆ ಎಲ್ಲಿಟ್ಟೆನೆಂದು ನೆನಪಿರಲಿಲ್ಲ. ಕಿಟಕಿಯಲ್ಲೇ ಇಟ್ಟೆನೆಂದು ಅರೆನೆನಪು. ಆದರೆ ಅಲ್ಲಿ ಕಾಗದ ಕಾಣದುದರಿಂದ ನಂಬಿಕೆಯಾಗದು. ಪೆಟ್ಟಿಗೆ, ಹಾಸಿಗೆ, ಕೊನೆಗೆ ಅಗಸನಿಂದ ತಂದಿದ್ದ ಮಡಿಬಟ್ಟೆಗಳನ್ನು ಕೂಡ ಹುಡುಕಿದೆ. ಎಲ್ಲಿಯೂ ಕಾಗದ ಸಿಗಲಿಲ್ಲ. ಕಿಟಕಿಯ ಹೊರಗೆಲ್ಲಾದರೂ ಬಿದ್ದಿದೆಯೋ ಏನೋ, ಗಾಳಿ ಹೊರಗೆ ಹಾಕಿರಬಹುದೆಂದು ಹುಡುಕಿದೆ. ಆದರೆ ಅಲ್ಲಿ ಹಳೆಯ ಕಾಗದಗಳು ಹರಿದ ಚೂರುಗಳ ಹೊರತು ಬೇರೆ ಯಾವ ಕಾಗದವೂ ಇರಲಿಲ್ಲ. ಯಮುನೆಯ ಕಾಗದ ಹೀಗೆ ಹೋಯಿತಲ್ಲ ಎಂದು ಮಾತ್ರ ನನಗೆ ಬಹಳ ದುಃಖವಾಯಿತು. ಆದರೆ ಈ ದುಃಖ ಬಹಳಹೊತ್ತು ಉಳಿಯಲಿಲ್ಲ ಮರುದಿನ ಹಾಸನಕ್ಕೆ ಹೊರಡುವ ಸಂಭ್ರಮದಲ್ಲಿ ಕಾಗದ ಕಳೆದುಹೋದ ಚಿಂತೆ ಮರೆಸಿಹೋಯಿತು.

ಲಕ್ಷ್ಮಿಯ ಮದುವೆಯಲ್ಲಿ ಅಂತಹ ವಿಶೇಷವೇನೂ ಇರಲಿಲ್ಲ. ಎಲ್ಲ ಮದುವೆಗಳಂತೆಯೇ ಅದೂ ನಡೆಯಿತು. ಆದರೆ ಹಾಸನದಲ್ಲಿ ಮದುವೆ ನಡೆದುದರಿಂದ ನನಗೆ ಯಮುನಾ, ಲಲಿತೆಯರನ್ನು ನೋಡಲು ಅವಕಾಶ ಸಿಕ್ಕಿತು. ನನಗೆ ಶ್ಯಾಮನಲ್ಲಿ ಕೊಂಚ ಅನುಮಾನ ಬರುವಂತಹ ಘಟನೆಯೂ ನಡೆಯಿತು ! ಶ್ಯಾಮನ ಮನೆಯವರಿಗಾಗಲಿ, ಅವರ ಬೀಗರ ಮನೆಯವರಿಗಾಗಲಿ ಯಮುನೆಯ ತಂದೆತಾಯಿಯ ಪರಿಚಯವಿರಲಿಲ್ಲ. ಅಂದಮೇಲೆ ಮದುವೆಗೆ ಅವರನ್ನು ಕರೆಯಲು ಕಾರಣವೇ ಇಲ್ಲ. ಆದರೆ ಶ್ಯಾಮ್ ತನ್ನ ತಾಯಿಯನ್ನು ಜತೆಯಲ್ಲಿಯೇ ಕರೆದುಕೊಂಡುಹೋಗಿ ಯಮುನಾ, ಲಲಿತಾ ಇಬ್ಬರನ್ನೂ ಮದುವೆಗೆ ಕರೆದು ಬಂದಿದ್ದ. ನನಗೆ ಇದನ್ನು ಯಮುನಾ ಹೇಳಿದಳು. ಯಮುನಾ, ಲಲಿತಾ ಇಬ್ಬರೂ ಮದುವೆಗೇನೋ ಬಂದಿದ್ದರು. ಬಂದು ಅರಿಸಿನ ಕುಂಕುಮ ತೆಗೆದುಕೊಂಡು ಹೊರಡಲು ಸಿದ್ಧರಾದರು ಆಗ ಶ್ಯಾಮ್ ತಾಯಿಯ ಕಿವಿಯಲ್ಲೇನೋ

ಪಿಸುಗುಟ್ಟಿದ. ತಾಯಿ ಹಸೆಯಮೇಲಿಂದಲೇ "ಲಲಿತಮ್ಮ, ಒಂದು ಹಾಡು ಹೇಳಮ್ಮ, ನೀ ಚೆನ್ನಾಗಿ ಹಾಡುವೆಯಂತೆ" ಅಂದರು. ಲಲಿತಾ ಕಕ್ಕಾಬಿಕ್ಕಿಯಾದಳು. ಅವಳಿಗೆ ಈ ಕೋರಿಕೆ ಅನಿರೀಕ್ಷಿತವಾಗಿತ್ತು. ನನಗಂತೂ ಮನಸ್ಸು ಉಳುಕಿತು. ಲಲಿತೆಗೂ ಮನಸ್ಸು ಅಳುಕಿತು. ಯಮುನೆಗೆ ಹೇಳದೆ ತನಗೇ ಹೇಳಿದುದು ಅವಳಿಗೆ ಸರಿದೋರಲಿಲ್ಲ. ಕೂಡಲೇ "ನಮ್ಮಕ್ಕ ಹಾಡುತ್ತಾಳೆ, ನನಗೆ ಚೆನ್ನಾಗಿ ಬರುವುದಿಲ್ಲ" ಎಂದಳು. ಎಷ್ಟಿದ್ದರೂ ಹೆಂಗಸರು! ಹಾಡು ಹೇಳೆಂದಾಗ ಕೊಂಚವಾದರೂ ಮುರುಕುಮಾಡದೆ ಹಾಡುವುದು ಕಷ್ಟ. ತಮಗೆ ಹಾಡಲು ಬರುವುದಿಲ್ಲವೆಂದು ಸುಳ್ಳು ನಾಚಿಗೆಯಿಂದ ಅನ್ನುವುದು ಈ ಓಲಾಟ ಒಂದೆರಡು ನಿಮಿಷ ಅಷ್ಟೆ. ಇನ್ನೆಲ್ಲಿ ತಮ್ಮ ಮಾತನ್ನು ನಂಬಿಯೇಬಿಡುವರೋ ಎಂದು ತವಕಿಸಿ ಹಾಡಿಗೆ ಮೊದಲಿಡುವುದು. ಇದು ಹೆಂಗಸರ ಸ್ವಭಾವ ಅಂತೂ ಲಲಿತಾ ಅತಿವಿನಯದಿಂದ ಸಂಕೋಚಪಡುತ್ತಾ ಹಾಗಂದಳು. ನನ್ನ ಕಣ್ಣು ಅವಳಲ್ಲೇ ನಟ್ಟಿತು. ಅವಳ ಕಣ್ಣು ಶ್ಯಾಮನ ಕಡೆಗೆ ಓಡಿ ಅಲ್ಲಿಂದ ಪಕ್ಕಕ್ಕೆ ಸರಿದು ತಿರುಗಿ ಅವನಲ್ಲಿಗೇ ಹೋಗುತ್ತಿತ್ತು.

"ಹಾಗಾದರೆ ಇಬ್ಬರೂ ಹಾಡಿ"

ಒಂದು ಸ್ವಲ್ಪಹೊತ್ತು ಗಿಂಜಾಟನಡೆಸಿ ಯಮುನಾ, ಲಲಿತಾ ಇಬ್ಬರೂ ಹಾಡಿದರು. ಅನಂತರ ಶ್ಯಾಮನ ತಾಯಿಯ ಬಲವಂತಕ್ಕೆ ಇಬ್ಬರೂ ಬೇರೆ ಬೇರೆ ಹಾಡನ್ನು ಹಾಡಿದರು. ಲಲಿತಾ ಯಮುನೆಗಿಂತ ಚೆನ್ನಾಗಿ ಹಾಡಿದಳೇನೋ ನಿಜ. ಆದರೆ ನನ್ನ ಮನಸ್ಸು ಬಹಳ ಅಸಮಾಧಾನಗೊಂಡಿತು.

ಮದುವೆಯಾದನಂತರ ಯಮುನಾ-ಮನೆಗೆ ಹೋಗಿದ್ದೆ. ಕೊಂಚ ಹೊತ್ತು ಅವರೊಂದಿಗೆ ಮಾತನಾಡುತ್ತಿದ್ದು ಭಾರವಾದ ಹೃದಯ ಹೊತ್ತು ಶ್ಯಾಮನ ಮನೆಗೆ ಹಿಂದಿರುಗಿದೆ. ಲಲಿತ ಆಡಿದ ನಾಲ್ಕುಮಾತಿನಲ್ಲಿ ಮೂರು ಶ್ಯಾಮನ ವಿಷಯ! ಶ್ಯಾಮನೊಂದಿಗೆ ಮಾತನಾಡುವಾಗ ಅವನೂ ಲಲಿತೆಯ ಹಾಡಿಕೆಯನ್ನು ಹೊಗಳಿದ್ದ!

ಈ ಕತೆಯ ಓದುಗರಿಗೆ ಇವೆಲ್ಲಾ ಹುಚ್ಚುಹುಚ್ಚಾಗಿ ತೋರಬಹುದು. ನನಗೂ ಈಗ—ಆಗ ನಡೆದುದನ್ನು ಬರೆಯಲು ಹೊರಟಿರುವಾಗ—ಎಲ್ಲಾ

ವಿಚಿತ್ರವಾಗಿ ತೋರುತ್ತದೆ. ಈ ಸಣ್ಣ ಮಾತಿಗೆ ಇಷ್ಟು ಬೆಲೆಯೇ ಎಂದೆನ್ನಿಸುತ್ತದೆ. ಆದರೆ ಯೌವನಕ್ಕೆ ಕಾಲಿಟ್ಟ ಹೊಸದು. ಆಗ ನನ್ನ ಮನಸ್ಸಿನಮೇಲೆ ಒಂದೊಂದು ಘಟನೆಯೂ ಬಹಳ ತೀವ್ರವಾಗಿ ಅಚ್ಚನ್ನೊತ್ತುತ್ತಿತ್ತು. ಆಗ ನನಗೆ ಇದೇ ಬಹಳ ಮುಖ್ಯ ಎನಿಸಿತ್ತು. ಅಂದಿನ ಕತೆ ತಿಳಿಸುವಾಗ ಅದನ್ನು ಆವಹಾಗಿಯೇ ತಿಳಿಸಬೇಕಲ್ಲ. ಅಂತೂ ನನಗೆ ಶ್ಯಾಮನ ವಿಷಯಕ್ಕೆ ಮನಸ್ಸು ಬಹಳ ಅಸಮಾಧಾನಗೊಂಡಿತು. ಹಾಸನಕ್ಕೆ ಸಂತೋಷವಾಗಿ ಹಗುರ ಹೃದಯದಿಂದ ಹೋದವನು ಭಾರವಾದ ಹೃದಯದಿಂದ ಹಿಂದಿರುಗಿದೆ. ಅದಕ್ಕೆ ಇನ್ನೂ ಒಂದು ಕಾರಣ. ಯಮುನೆಗೆ ಮದುವೆಯ ಏರ್ಪಾಡಾಗುತ್ತಿದೆಯೆಂದು ತಿಳಿದುದು. ಯಮುನಾ ಎಷ್ಟಿದ್ದರೂ ನನಗೆ ಪ್ರಿಯಳಾಗಿದ್ದಳು. ಮೊದಲಿದ್ದ ಹುಚ್ಚುಮೋಹ ವಿಲ್ಲದಿದ್ದರೂ ಇನ್ನೂ ಅವಳ ಕಡೆಗೆ ಮನಸ್ಸು ವಾಲುತ್ತಿತ್ತು. ಅವಳನ್ನು ಬೆಂಗಳೂರಿನ ಯಾರೋ ಒಬ್ಬನಿಗೆ ಕೊಡಲು ಸಂಧಾನ ನಡೆಸುತ್ತಿದ್ದರೆಂದು ಗೊತ್ತಾಯಿತು. ಅದನ್ನು ನನಗೆ ಯಮುನಾ ತಾನೇ ಹೇಳಿದಳು. ಅವಳಿಗೇನೋ ಸಂತೋಷ. ತಾನು ಮದುವೆಯಾದಮೇಲೆ ತಮ್ಮ ಮನೆಗೆ ನಾನು ಬರಬೇಕು. ಹೀಗೆ ಮಾಡುತ್ತೇನೆ, ಹಾಗೆ ಮಾಡುತ್ತೇನೆಂದೆಲ್ಲಾ ಹೇಳಿದಳು. ಹಿಗ್ಗಿನಲ್ಲಿ ಕನಸು ಕಾಣುತ್ತಿದ್ದಳು. ಆದರೆ ನಾನು?

೮

ಪರೀಕ್ಷೆಯ ಫಲಿತಾಂಶ ಬಂದು ಕಾಲೇಜು ಮತ್ತೆ ಪ್ರಾರಂಭವಾಗಿತ್ತು. ಯಮುನಾ ಈಗ ಸೀನಿಯರ್ ಬಿ.ಎ. ಗೆ ಹೋಗಿದ್ದಳು. ಲಲಿತಾ ಸೀನಿಯರ್ ಇಂಟರ್ಮೀಡಿಯೆಟ್. ನನಗೆ ಮೊದಲನೆಯ ದರ್ಜೆಯಲ್ಲೇ ಪಾಸಾಗಿತ್ತು. ಶ್ಯಾಮನಿಗೂ ತುಂಬಾ ನಂಬರು ಬಂದಿತ್ತು. ಆದರೆ ಮೊದಲನೆಯ ದರ್ಜೆಗೆ ಕೊಂಚ ಕಡಿಮೆಯಾಗಿತ್ತು. ಇದರಿಂದ ಅವನಿಗಾದಷ್ಟೇ ನನಗೂ ಅಸಮಾಧಾನವಾಗಿತ್ತು. ನಾವಿಬ್ಬರೂ ಜತೆಗೆ ಓದಿದರೂ ಅವನಿಗೆ ಕಡಿಮೆ ಬಂತಲ್ಲ ಎಂದು ನನಗೆ ಮನಸ್ಸಿನೋವಾಯಿತು. ಅವನಿಗೆ ನನ್ನ ಬಗ್ಗೆ ಕೊಂಚ ಅಸೂಯೆ ಮೂಡಿತು. ಈ ಅಸೂಯೆಯನ್ನು ಅವನು ಬಚ್ಚಿಡಲು ಪ್ರಯತ್ನಿಸಿದರೂ ಒಂದೊಂದು ಸಾರಿ ಅದು ಅವನ ಚಾತುರ್ಯವನ್ನು ಭೇದಿಸಿಕೊಂಡು ತೋರುತ್ತಿತ್ತು.

ನಾವು ಕಾಲೇಜಿಗೆ ಸೇರುವಾಗ ಯಾವ ಯಾವ ವಿಷಯ *(Subject)* ತೆಗೆದುಕೊಳ್ಳಬೇಕೆಂದು ಚರ್ಚೆ ನಡೆಸುತ್ತಿದ್ದೆವು. ಆಗ ನಾನು ಆನರ್ಸ್ ತೆಗೆದುಕೊಳ್ಳುವ ತೀರ್ಮಾನ ಮಾಡಿದ್ದೆ. ಹಾಗೆಯೇ ನೀನೂ ಆನರ್ಸ್ ತೆಗೆದುಕೋ ಎಂದು ಶ್ಯಾಮನಿಗೆ ಹೇಳಿದೆ. ಆದರೆ ಶ್ಯಾಮ್ ಮಾತೇ ಆಡದೆ ಕೂತ. ಎಷ್ಟು ಮಾತನಾಡಿಸಿದರೂ ಜಗ್ಗಲಿಲ್ಲ. "ನಾವಿಬ್ಬರೂ ಜತೆಯಲ್ಲಿಯೇ ಮೂರುವರ್ಷ ಕಳೆಯಬಹುದು. ಆನರ್ಸ್ ತೆಗೆದುಕೋ" ಎಂದು ನಾನು ಒತ್ತಾಯಪಡಿಸಿದೆ.

"ನಮಗೆಲ್ಲಪ್ಪ ಆನರ್ಸು ? ಅದೆಲ್ಲಾ ನಿನ್ನಂತಹ ಬುದ್ಧಿವಂತರಿಗೆ" ಅಂದ ಶ್ಯಾಮ್. ಅಸೂಯೆಯಿಂದ ಒಂದು ಹೆಣ್ಣು ಮತ್ತೊಂದು ಹೆಣ್ಣಿನ ವಜ್ರದ ಓಲೆಯನ್ನು ನೋಡಿ ಚುಚ್ಚಿ ಮಾತಾಡುತ್ತಾ "ನಮಗೇಕಮ್ಮ ಅಂತಹ ಓಲೆ. ಅದೆಲ್ಲಾ ನಿಮ್ಮಂತಹ ಹಣವಂತರಿಗೆ! ನಮ್ಮಂತಹ ಬಡವರಿಗೆ ಬಿಳಿಕಲ್ಲಿನದೇ" ಎನ್ನುವಂತಿತ್ತು ಅವನ ನೋಟ, ಮಾತಿನ ತಿರುವು. ನಾಟಕದಲ್ಲಿ ಪಾತ್ರವಹಿಸಿದ ವಾಸನೆ ಅವನ ಸಾಮಾನ್ಯ ನಡತೆಗೂ ಅಂಟಿಕೊಂಡಿತ್ತು.

"ನಿನಗೆ ಆನರ್ಸ್ ಕೊಡದೆ ಇದ್ದರೆ ಇನ್ಯಾರಿಗೊ ಕೊಡಬೇಕು. ನಿನಗೂ ಶೇಕಡಾ ಐವತ್ತೆಂಟು ಬಂದಿದೆ. ನನಗೆ ಮೂರು ನಂಬರು ತಾನೇ ಹೆಚ್ಚು"

"ಅದಕ್ಕೇ ನಾನು ಹೇಳಿದ್ದು. ನಿನ್ನ ಮುಂದೆ ನಾನೆಲ್ಲಿ!" ಅಂದ ಶ್ಯಾಮ್ ಚುಚ್ಚುವಂತೆ !

"ಹೋಗೋ, ಹೋಗೋ! ನನಗೆಲ್ಲೋ ಅಪ್ಪಿತಪ್ಪಿ ಹೆಚ್ಚು ಬಂದಿದೆ, ಅಷ್ಟೇ"

ಶ್ಯಾಮುನ ಮಾತಿನಿಂದ ಆಗ ನನಗೆ ಬಹಳ ಮನಸ್ಸು ನೊಂದು ಕೊಂಡಿತು. ನನಗೆ ಹೆಚ್ಚು ನಂಬರು ಬಂಧುದು ನನ್ನ ತಪ್ಪೇ? ಅದಕ್ಕೇ ನನ್ನನ್ನು ಅಪಾರ್ಥಮಾಡಿಕೊಂಡು ನನ್ನಿಂದ ದೂರವಾಗುವನಲ್ಲಾ ಎಂದು ನಾನು ಒದ್ದಾಡಿದೆ. ಯಮುನೆಗೆ ನನ್ನ ಈ ಸಂಕಟ ಹೇಳಿಕೊಂಡು ನೀರು ಕರೆದೆ ಅವನಿಗೆ ಅಸೂಯೆ ಎನ್ನುವ ಯೋಚನೆಯೇ ನನಗೆ ಬರಲಿಲ್ಲ. ಆದರೆ ಅವನು ಈ ವಿಷಯಕ್ಕೆ ನನ್ನಿಂದ ದೂರವಾಗುವನಲ್ಲ ಎಂದು ದುಃಖವಾಯಿತು.

ಶ್ಯಾಮುನೂ ನನ್ನ ಜತೆಯಲ್ಲಿಯೇ ಬಿ.ಎ. ಗೆ ಸೇರಿದ. ಈಗ ನಾವೂ ಮಹಾರಾಜ ಕಾಲೇಜಿನ ವಿದ್ಯಾರ್ಥಿಗಳಾಗಿದ್ದೆವು ದಿನವೂ ನಾನು ಶ್ಯಾಮುನ ಮನೆಯ ಬಳಿ ಹೋಗಿ ಅವನ ಜತೆಯಲ್ಲಿಯೇ ಕಾಲೇಜಿಗೆ ಬರುತ್ತಿದ್ದೆ. ಟೆನ್ನಿಸ್ ಆಟ ಮುಗಿಸಿಕೊಂಡು ಅವನೊಂದಿಗೆ ಕೊಂಚ ದೂರ ಸುತ್ತಿಕೊಂಡು ಬಂದು, ಯಮುನಾ ಸಿಕ್ಕಿದರೆ ಅವಳೊಂದಿಗೆ ನಾಲ್ಕುನಿಮಿಷ ಹರಟೆ ಹೊಡೆದು ಮನೆಗೆ ಹೋಗುತ್ತಿದ್ದೆ. ಎಂದಿನಂತೆಯೇ ಶ್ಯಾಮ್ ಅವರಿವರನ್ನು ಟೀಕೆಮಾಡುತ್ತಾ ಕೆಲವರನ್ನು ಹೊಗಳುತ್ತಾ ಇದ್ದ. ನಾನು ಅವನು ಹೇಳುವುದನ್ನೆಲ್ಲಾ ಒಪ್ಪುತ್ತಿದ್ದೆ.

ಕಾಲೇಜು ಆರಂಭವಾಗಿ ಒಂದು ತಿಂಗಳಾಗಿತ್ತು. ಒಂದುದಿನ ಸಂಜೆ ನಾನು ಶ್ಯಾಮುನೊಂದಿಗೆ ಕುಕ್ಕನಹಳ್ಳಿಯ ಕೆರೆಯ ಏರಿಯಮೇಲೆ ನಡೆದುಹೋಗುತ್ತಿದ್ದೆ. ಕೈಲಾಸಂ ನಾಟಕಗಳಲ್ಲಿ ಎಂತಹ ಹಿರಿತನವಿದೆ. ಅವುಗಳ ಉತ್ಕೃಷ್ಟ ಕಲೆಗಾರಿಕೆಗೆ ಸಮನಾದುದು ಮತ್ತೆ ಯಾವ ನಾಟಕ ಗಳಲ್ಲಿಯೂ ಇಲ್ಲ. ಷೇಕ್ಸ್‌ಪಿಯರ್ ಹೇಗೋ ಕೈಲಾಸಂ ಹಾಗೆಯೇ ಎಂದು ಶ್ಯಾಮ್ ಹೇಳುತ್ತಿದ್ದ. ನಾನು ಹೂಂಗುಡುತ್ತಿದ್ದೆ. ಇದ್ದಕ್ಕಿದ್ದಂತೆ ಶ್ಯಾಮ್ ಮಾತು ನಿಲ್ಲಿಸಿದ. ಏಕೆಂದು ನನಗೆ ತಿಳಿಯಲಿಲ್ಲ. ಅವನು ನಿಂತಲ್ಲಿಯೇ ನಿಂತು ಸುತ್ತ ನೋಡಲಾರಂಭಿಸಿದ. ಸೂರ್ಯ ಮುಳುಗುತ್ತಿದ್ದ. ಕೆಂಪು ರಂಗನ್ನು ಕೆರೆಯ ಒಂದು ಅಂಚಿನಿಂದ ಮತ್ತೊಂದು ಅಂಚಿಗೆ ಹಾಯಿಸುತ್ತಿರುವಂತೆ ಕೆರೆ ಥಳಥಳಿಸುತ್ತಿತ್ತು. ನಾವು ನಿಂತ ಜಾಗದಲ್ಲಿ

ಮೆಟ್ಟಲಿನಮೇಲೊಬ್ಬ ಮೀನುಗಾರ ಗಾಳವನ್ನೆಸೆದು ಕಲ್ಲಿನ ಮೂರ್ತಿಯಂತೆ ಕುಳಿತಿದ್ದ. ಕೆರೆಯ ಆ ಪಕ್ಕದಲ್ಲಿ ನಾಲ್ಕಾರು ದನ ಮೇಯುತ್ತಿತ್ತು. ಅಲ್ಲಿಯೇ ಉಳಿದಿದ್ದ ಒಂದು ದೊಡ್ಡಮರ ನೆಲದಿಂದ ತಲೆಯೆತ್ತಿ ನಿಂತ ಯಾವುದೋ ಭೂತದಂತೆ ಕಾಣುತ್ತಿತ್ತು. ಅದರಾಚೆ ಟಾರು ರಸ್ತೆಯಮೇಲೆ ಹರಿದುಹೋಗುತ್ತಿದ್ದ ಲಾರಿಯೊಂದರ ಹಿಂಭಾಗದಲ್ಲಿ ಹೊಗೆ ಮೇಲೇರುತ್ತಾ ಓಡುತ್ತಿತ್ತು. ಕೆರೆಯ ಪಕ್ಕಕ್ಕಿದ್ದ ತೆಂಗಿನ ತೋಟದ ನೆರಳು ಕತ್ತಲಿನ ಅಚ್ಚನ್ನು ನೆಲಕ್ಕೆ ಒತ್ತಿ ಬೆಳೆಸುವಂತೆ ಕಾಣುತ್ತಿತ್ತು. ನೆರಳುಗಳು ಮೆಲ್ಲ ಮೆಲ್ಲನೆ ಬೆಳೆದು ಕೆಂಪನ್ನು ಕಪ್ಪಿನಲ್ಲಿ ಅಳವಡಿಸಿ ಮುಚ್ಚಿದುವು. ಕತ್ತಲೆಯೇ ಸೀರಾಗಿ ಕೆರೆಯಾದಂತೆ ತೋರಿತು.

"ಸೀನು, ಹುಟ್ಟಿದರೆ ಕವಿಯಾಗಿ ಹುಟ್ಟಬೇಕು. ಇಂತಹ ಸುಂದರವಾದ ದೃಶ್ಯವನ್ನು ಸವಿಯಬೇಕಾದರೆ ಕವಿ ಹೃದಯ ಇರಬೇಕು"

ಶ್ಯಾಮನ ದನಿ ಉದ್ವೇಗದಿಂದ ಭಾರವಾಗಿತ್ತು; ನಡುಗುತ್ತಿತ್ತು. ನನ್ನ ಕೈಯನ್ನು ಭದ್ರವಾಗಿ ಹಿಡಿದುಕೊಂಡಿದ್ದ.

"ಹೂಂ" ಎಂದೆ ನಾನು. ನನಗೆ ಹೆಚ್ಚಾಗಿ ಏನೂ ಹೇಳಲಾಗಲಿಲ್ಲ. ಆ ನಿಮಿಷದಲ್ಲಿ ಏನೋ ಒಂದು ಬಗೆಯ ನೈಮರೆವು ಆ ನೈಮರೆವಿನ ಶಾಂತಿಯಲ್ಲಿ ಒಂದೆರಡು ಅಲೆಗಳು ಮೆಲ್ಲನೆದ್ದು ಅಳುಕಿಸುತ್ತಿದ್ದುವು. ಮೆಲ್ಲಮೆಲ್ಲನೆ ಲಲಿತೆಯ ರೂಪವೆದ್ದು ನನ್ನ ಶಾಂತಿಯನ್ನು ಪೂರ್ಣವಾಗಿ ಅಪಹರಿಸಿಕೊಂಡಿತು. ಮನಸ್ಸು ಮುಖದಮೇಲೆ ನೋವಿನ ನೆರಳನ್ನು ಒತ್ತಿತು. ನೈ ಮಿಸುಗುಟ್ಟಿತು.

"ಸೀನು, ಇಲ್ಲೇ ಕುಳಿತುಕೊಳ್ಳೋಣ"

ಇಬ್ಬರೂ ಅಲ್ಲಿಯೇ ಇದ್ದ ಒಂದು ಮೆಟ್ಟಲಿನ ಮೇಲೆ ಕುಳಿತೆವು. ಒಬ್ಬರ ಕೈಯನ್ನೊಬ್ಬರ ಕೈಯಲ್ಲಿಟ್ಟು ಪಕ್ಕದಲ್ಲೇ ಕುಳಿತಿದ್ದೆವು. ಶ್ಯಾಮ್ ಹಾಗೆಯೇ ನನ್ನ ಬೆನ್ನಮೇಲೆ ಕೈಯಿಟ್ಟು ತಲೆಯನ್ನು ಭುಜದಮೇಲಿಟ್ಟು ಒರಗಿಕೊಂಡ. ನನ್ನ ಕೈ ಅವನ ತಲೆಗೂದಲನ್ನು ನೇವರಿಸುತ್ತಿತ್ತು. ಏನೇನೋ ಕಲ್ಪನೆಗಳು, ಶಾಂತಿಯಲ್ಲೊಂದು ಅಶಾಂತಿ, ಮೌನದ ಕೊರಗು, ಏನೋ ಒಂದು ಭಾರ ಹೃದಯಕ್ಕೆ ಹತ್ತಿಕೊಂಡಂತಾಗಿತ್ತು. ಆದರೆ

ಅವನ ತಲೆ ನನ್ನ ಭುಜದ ಮೇಲಿದ್ದುದು ಒಂದು ಬಗೆಯಲ್ಲಿ ಆಪ್ಯಾಯಮಾನವಾಗಿತ್ತು.

ಎಷ್ಟು ಹೊತ್ತು ಹಾಗೆಯೇ ಇದ್ದೆವೋ ತಿಳಿಯದು. ಶ್ಯಾಮ್ ಏನು ಕನಸು ಕಾಣುತ್ತಿದ್ದನೋ ಏನೋ ಇದ್ದಕಿದ್ದಂತೆ ನಿಟ್ಟುಸಿರು ಬಿಟ್ಟು ತಲೆಯನ್ನು ಸರಿಸಿದ.

"ಯಾಕೋ, ಶ್ಯಾಮ್, ಏನೋ ?" ನಾನು ತುಂಬಿದ ಕೊರಳಿನಿಂದ ಮೃದುವಾಗಿ ಕೇಳಿದೆ.

ಶ್ಯಾಮ್ ಮಾತೇ ಆಡಲಿಲ್ಲ. ಕಣ್ಣು ಆಕಾಶದಲ್ಲಿ ಬಿಳಿಯೆಳ್ಳಿನಂತೆ ಸಿಡಿದಿದ್ದ ನಕ್ಷತ್ರಗಳ ಕಡೆಗೆ ಓಡಿತ್ತು. ನೀರಿನ ತೆರೆಯೊಂದು ಬಿದ್ದಂತೆ ತೋರುತ್ತಿತ್ತು ಅದರ ಕಾಂತಿ. ಶ್ಯಾಮ್ ಮತ್ತೊಂದು ಬಾರಿ ನೀಳವಾಗಿ ಉಸಿರು ತೆಗೆದುಕೊಂಡ. ನನ್ನ ಕೈ ಅವನ ಹಣೆಗೆ ಹೋಯಿತು. ಅವನ ಹಣೆ ಕಾದಿತ್ತು.

"ಶ್ಯಾಮಸುಂದ್ರ, ಯಾಕೋ? ಏನಾಯಿತೋ?" ನಾನು ಕೊಂಚ ಗಾಬರಿಯಿಂದಲೇ ಕೇಳಿದೆ.

"ಏನೂ ಇಲ್ಲ" ಬಹಳ ಭಾರವಾದ ದನಿಯಲ್ಲಿ, ಯಾವುದೋ ಹೊರಲಾರದ ನೋವನ್ನು ಹೊತ್ತ ದನಿಯಲ್ಲಿ ಶ್ಯಾಮ್ ಉತ್ತರ ಕೊಟ್ಟ.

"ಏನು ಯೋಚನೆ, ನನಗೆ ಹೇಳಬಾರದೇನೋ. ನನಗಲ್ಲದೆ ಇನ್ನು ಯಾರಿಗೆ ಹೇಳಬೇಕೋ—" ನಾನು ವಾತ್ಸಲ್ಯದಿಂದಲೇ ಹೇಳಿದೆ.

ಅದಕ್ಕೆ ಉತ್ತರವಾಗಿ ಶ್ಯಾಮ್ ಮತ್ತೊಂದು ನಿಟ್ಟುಸಿರು ಬಿಟ್ಟ. ನಾವು ಕುಳಿತಿದ್ದ ಜಾಗದ ಪಕ್ಕದಲ್ಲಿ ಯಾರೋ ನಡೆದುಕೊಂಡು ಹೋದರು. ಅವರ ಕಾಲು ಸಪ್ಪಳ ಹಿಂದಿನ ಕಾಲದ ಮಸಕು ನೆನಪಿನಂತೆ ಸಣ್ಣಗಾಗುತ್ತಾ ದೂರದೂರಕ್ಕೆ ಹೋಗುತ್ತಿತ್ತು. ಶ್ಯಾಮ್ ಮಾತಿಲ್ಲದೆ ಮೌನವಾಗಿ ತನ್ನ ತಲೆಯನ್ನು ನನ್ನ ತೊಡೆಯ ಮೇಲಿಟ್ಟು ಮಲಗಿದ. ನಾನು ಬಹಳ ವಾತ್ಸಲ್ಯದಿಂದ ಅವನ ಹಣೆಯ ಮೇಲೆ ಹರಿದು ಬಂದಿದ್ದ ಕ್ರಾಪಿನ ಕುರುಳನ್ನು ತಿದ್ದುತ್ತಿದ್ದೆ! ಅವನ ಕಣ್ಣು ಕೊಂಚ ಹೊತ್ತು ಮುಚ್ಚಿತ್ತು. ಮತ್ತೆ ಅದು ತೆರೆದಾಗ ಯಾವುದೋ ಆಸೆ ಅಲ್ಲಿ ಮನೆಮಾಡಿಕೊಂಡಂತೆ ಕಾಣುತ್ತಿತ್ತು.

ಶ್ಯಾಮ್ ಇದ್ದಕ್ಕಿದ್ದಂತೆ ಎದ್ದು ಕುಳಿತ. ಅಲ್ಲಿಂದ ಹೊರಟುಬಿಡುತ್ತೇವೆಂದುಕೊಂಡು ನಾನು ಏಳಲು ಸಿದ್ಧನಾದೆ. ಆದರೆ ಶ್ಯಾಮ್ ಅಲುಗಾಡದೆ ದೂರದಲ್ಲಿ ಕೆರೆಯ ಅಂಚಿನಲ್ಲಿ ಬರಿಯ ನೆರಳಾಗಿ ಕಾಣುತ್ತಿದ್ದ ದಿಗಂತದಂಚಿನ ಕಡೆಗೆ ದಿಟ್ಟಿಸುತ್ತಿದ್ದ. ಏನೆನಿಸಿತೋ ಏನೋ ಹಾಡಲಾರಂಭಿಸಿದ.

ಬಾ ಗೆಳತಿ, ನನ್ನೊಡನೆ ಗಗನದಂಚಿಗೆ
ರವಿ ಮೂಡುವ ಹೊಂಗಡಲಿನ ಮಿಂಚುಹೊಂಚಿಗೆ!

ಸುತ್ತೆಲ್ಲವು ಕತ್ತಲೆಕುಲ ಹುತ್ತವೆದ್ದಿದೆ,
ಎತ್ತೆತ್ತಲು ಬೆಳಕು ಸತ್ತು ಮುರಿದು ಬಿದ್ದಿದೆ,
ತಪ್ತರೆದೆಯ ಬೇಗೆಯ ಹೆಡೆ ಮೋಡವೆದ್ದಿದೆ,
ಅದನೆಲ್ಲವ ಮರೆಸಿ ಉಳಿಪ ಒಲವ ಸಂಚಿಗೆ!
ಬಾ ಗೆಳತಿ............

ನೆಲಮುಗಿಲಿಗೆ ಕಡಲಾರತಿ ಎತ್ತುವಲ್ಲಿಗೆ
ಬೆಳಕು ಬಳ್ಳಿ ರೂಪಿಸಿರುವ ಸುತ್ತುಮಲ್ಲಿಗೆ
ದಳಗಳೆಲ್ಲ ಸಿಡಿದು ತಾರೆಯಾಗುವಲ್ಲಿಗೆ
ಕವಿಯ ಕನಸು ಕಾಣುತಿರುವ ಮೋಹಮಿಂಚಿಗೆ
ಬಾ ಗೆಳತಿ........

ಭುವಿಯ ಬಂಧದಲ್ಲಿ ಸಿಲುಕಿ ಕೆಡೆದು ನಿಂತಿದೆ
ಸಾಗರದಲೆ, ಅವರೊಡಲಿನ ಬೇಗೆ ಕಂತಿದೆ
ಇನ್ನೇನಿಗೊ ಪ್ರಳಯ ತರುವ ರುದ್ರನಂತಿದೆ,
ಅದ ಮರೆಸುವ, ಎದೆಯುಳಿಸುವ ಬಲವಿನಂಚಿಗೆ
ಬಾ ಗೆಳತಿ...........

ಶ್ಯಾಮನೇನೋ ಹಾಡು ಮುಗಿಸಿದ. ಹಾಡಿನ ಮಾಧುರ್ಯದೊಂದಿಗೆ ಹೃದಯ ಕಲಕುವ ತೀಕ್ಷ್ಣ ನೋವು ನನ್ನ ಮನಸ್ಸನ್ನು ಕೆರಳಿಸಿತು. ನನಗೆ ಕಣ್ಣಿನಲ್ಲಿ ನೀರು ಹನಿಯಿತು. ಒಂದೆರಡು ನಿಮಿಷ ನಾವಿಬ್ಬರೂ ಮಾತಾಡಲಿಲ್ಲ. ಶ್ಯಾಮ್ ಗಗನದ ಅಂಚಿನ ಕಡೆಗೇ ತೆರೆದ ಕಣ್ಣಿನಿಂದ

ದಿಟ್ಟಿಸುತ್ತಿದ್ದ. ಅಲ್ಲಿ ಯಾವ ಕನಸು ಇತ್ತೋ, ಅವನಿಗೆ ಅದರಲ್ಲಿ ಯಾವ ಸುಖವೋ ನನಗೆ ತಿಳಿಯಲಿಲ್ಲ. ಒಂದೆರಡು ಕ್ಷಣ ಬಿಟ್ಟು ಮತ್ತೆ ನೀಳವಾಗಿ ಉಸಿರುಬಿಟ್ಟು ಎದ್ದುನಿಂತ. ಅಂದು ರಾತ್ರಿ ದಾರಿಯಲ್ಲಿ ನಾವಿಬ್ಬರೂ ಮಾತನಾಡಲಿಲ್ಲ. ನಮ್ಮಿಬ್ಬರ ಹೃದಯವೂ ತುಂಬಿತ್ತು. ಆ ತುಂಬು ಮಾತಿನಲ್ಲಿ ತುಳುಕಲಾರದಾಯಿತು. ಮಾತಿಗೆ ಆ ಪೂರ್ಣತೆಯನ್ನು ಹಿಡಿಯುವ ಶಕ್ತಿಯಿರಲಿಲ್ಲ!

ಮರುದಿನ ಶ್ಯಾಮನನ್ನು ಕಂಡಾಗ ಅವನ ಮುಖ ಕೊಂಚ ಸಪ್ಪಗಿತ್ತು. ಹಿಂದಿನ ರಾತ್ರಿಯೆಲ್ಲಾ ನಿದ್ರೆಯೇ ಇಲ್ಲದೆ ಕಳೆದವನಂತೆ ತೋರಿದ. ಕಣ್ಣುಗಳೆರಡೂ ಬಹಳ ಕೆಂಪಾಗಿತ್ತು. ರಾತ್ರಿಯೆಲ್ಲಾ ನಿದ್ರೆಯಿಲ್ಲದಿದ್ದರೆ ಬೆಳಿಗ್ಗೆ ಮುಖದಲ್ಲಿ ಕಾಣುವ ಒಂದು ಬಗೆಯ ಸುಂದರ ಮೃದುತೆ ಅವನಲ್ಲಿತ್ತು. ಕಣ್ಣಿನ ಕೆಂಪಿನ ಹಿಂದೆ ಮಾತ್ರ ಇನ್ನೂ ನೋವಿನ ನೆರಳು ಇಣುಕುತ್ತಿತ್ತು.

"ಲೋ, ನಿನ್ನೆ ನೀನು ಹಾಡಿದೆಯಲ್ಲಾ—"

"ನೀನು, ಅವನ್ನು ಜ್ಞಾಪಿಸಬೇಡ. ನಿನ್ನೆ ಮನಸ್ಸು ಯಾಕೋ ವಿಚಿತ್ರವಾಗಿತ್ತು. ರಾತ್ರಿಯೆಲ್ಲ ನಿದ್ರೆಯೇ ಬರಲಿಲ್ಲ"

"ಏನಾಗಿತ್ತು?— ಇದ್ದಕ್ಕಿದ್ದ ಹಾಗೆ ಆ ಹಾಡನ್ನು ಯಾಕೆ ಹಾಡಿದೆ?"

"ಅದು ನೆನಪಿಗೆ ಬಂತು. ಹಾಡಿದರೆ ಮನಸ್ಸಿಗೆ ಕೊಂಚ ಹಿತವಾದೀತೆಂದು ಹಾಡಿದೆ. ಆದರೆ ಅದರಿಂದ ಏನೂ ಪ್ರಯೋಜನವೇ ಆಗಲಿಲ್ಲ."

"ನನಗೆ ಅದಿನ್ನೂ ಕಿವಿಯಲ್ಲಿ ಗುಂಯ್ಗುಟ್ಟುತ್ತಿದೆ. ಯಾರು ಬರೆದುದೋ ಅದು?"

"ನಮ್ಮ ಕಾಲೇಜಿನಲ್ಲೇ ಓದುತ್ತಿದ್ದಾನೆ ಅವನು. ನೀನು ನೋಡಿರಬೇಕು."

"ಯಾರು?"

"ಈವತ್ತು ತೋರಿಸುತ್ತೇನೆ"

ನಾವಿಬ್ಬರೂ ಕಾಲೇಜಿಗೆ ಹೋದೆವು. ಇಂತಹ ಸುಂದರ ಕವಿತೆಯನ್ನು ಬರೆದ ಕವಿ ಯಾರಿರಬಹುದೆಂದು ನನಗೆ ಬಹಳ ಕುತೂಹಲ. ಅವನ

ರೂಪವನ್ನು, ಆಕೃತಿಯನ್ನು ನಾನು ಮನಸ್ಸಿನಲ್ಲಿಯೇ ಚಿತ್ರಿಸಿಕೊಳ್ಳ ಲಾರಂಭಿಸಿದೆ. ಎತ್ತರವಾಗಿ ಕಟ್ಟುಮಸ್ತಾದ ದೇಹ. ನಗುನಗುತ್ತಿರುವ ಮುಖ. ಕಂಡವರ ಒಳಹೊರಗನ್ನೆಲ್ಲಾ ಮುತ್ತುವ ಮಿಂಚುಗಣ್ಣು, ಉದ್ದವಾಗಿ ಹರವಾಗಿ ಬೆಳೆದ ತಲೆಗೂದಲು ಎಂದೆಲ್ಲಾ ಕಲ್ಪಿಸಿಕೊಂಡೆ. ಇನ್ನೊಂದು ಬಾರಿ ಬೇರೆ ಬಗೆಯ ಚಿತ್ರ ಕಣ್ಣಮುಂದೆ ಕಟ್ಟುತ್ತಿತ್ತು. ನರೆಯುತ್ತಿರುವ ತಲೆಗೂದಲು, ದಪ್ಪಮುಖ, ಉದ್ದವಾದ ಮೂಗು ಎಂದು ಒಂದು ಬಾರಿ ಯೋಚಿಸುತ್ತಿದ್ದೆ. ಅವನನ್ನು ನೋಡಬೇಕೆನ್ನುವ ಆಸೆಯಲ್ಲಿ ನಾನು ಕಾಲೇಜಿನಲ್ಲಿ ಕಂಡ ಮುಖಗಳನ್ನೆಲ್ಲಾ ನೆನಸಿಕೊಳ್ಳುತ್ತಿದ್ದೆ. ಆದರೆ ಯಾವ ಮುಖವನ್ನೂ ಒಪ್ಪಲು ನನಗೆ ಮನಸ್ಸು ಬಾರದು.

ಆದಿನ ಎಷ್ಟುಹೊತ್ತು ತರಗತಿಯಲ್ಲಿ ಕಳೆದೆನೋ ತಿಳಿಯದು. ಉಪಾಧ್ಯಾಯರು ಏನು ಪಾಠ ಮಾಡಿದರೋ ಅದೂ ತಿಳಿಯದು. ಮನಸ್ಸು ತನ್ನಸುತ್ತ ಸವಿಯ ನೋವಿನ ಜೇಡನಬಲೆಯನ್ನು ನೇದುಕೊಂಡಿತ್ತು. ಅದರಲ್ಲಿ ವೈಮರೆತ ನನಗೆ ಮತ್ತೆ ಯಾವುದರಲ್ಲೂ ಆಸಕ್ತಿಯಿರಲಿಲ್ಲ.

ಆದಿನ ನಮಗೆ ಆ ಕವಿ ಸಿಗಲಿಲ್ಲ. ಕಾಲೇಜಿಗೆ ಅವನು ಬಂದಿರಲಿಲ್ಲವೋ ಏನೋ. ಮರುದಿನವಾದರೂ ಸಿಗಬಹುದೆಂದು ನಮ್ಮ ಆಸೆ. ಅಂದು ಸಂಜೆಯೇ ಯಮುನೆಗೂ, ಲಲಿತೆಗೂ ಆ ಹಾಡನ್ನು ಹೇಳಿದೆ. ಆ ಹಾಡನ್ನು ಬರೆದುಕೊಡೆಂದು ಅವರು ನನ್ನನ್ನು ಪೀಡಿಸಿದರು. ಆ ಕವಿಯನ್ನು ಕಾಣಬೇಕೆಂಬ ಅವರೂ ಆಸೆ ತೋರಿಸಿದರು. ಆ ಹಾಡನ್ನು ಶ್ಯಾಮನಿಂದ ಹಾಡಿಸಿ ಕೇಳಬೇಕೆಂದು ಲಲಿತೆ ಕಾತರಿಸಿದಳು.

ಮರುದಿನ ಕಾಲೇಜಿಗೆ ಬರುವ ವೇಳೆಗೆ ಗುಲ್ಲೋಗುಲ್ಲು! ಹುಡುಗರೆಲ್ಲ ನನ್ನ ಕಡೆಗೆ ತಿರುಗಿ ಕಣ್ಣುಮಿಟುಕಿಸಿ ಹುಸಿನಗೆ ನಕ್ಕು ಪಿಸುಗುಟ್ಟುತ್ತಿದ್ದರು. ನನಗೆ ಇದು ಅರ್ಥವಾಗಲಿಲ್ಲ. ಮತ್ತೊಂದು ಗುಂಪಿನವರ ಮಾತು ಕಿವಿಗೆ ಬಿತ್ತು.

''ಇವನೇ ಯೇನೋ?''

''ಹೌದೋ—''

''ಹಾಗಾದರೆ 'ರೋಫ್'ಹಾಕಿಕೊಂಡ ಅನ್ನು''

''ಎಂತಹ ಗಂಡುಬೀರಿಯೋ—''

''ಯಮುನಾ ವಿಹಾರಿ ಅನ್ನು''

ಗೊಳ್ಳನೆ ಎಲ್ಲರೂ ನಕ್ಕರು.

ನನಗೆ ಎದೆಗೆ ಮುಳ್ಳು ಚುಚ್ಚಿದಂತಾಯ್ತು. ಯಮುನೆಗೂ ನನಗೂ ಕೆಟ್ಟ ಸಂಬಂಧ ಕಲ್ಪಿಸಿ ಮಾತನಾಡುತ್ತಿದ್ದಾರೆ ಎಂದು ಗೊತ್ತಾಯಿತು. ''ಥುತ್ಸ್ ! ಹೀನಪಶುಗಳು" ಎಂದುಕೊಂಡೆ.

ಮುಂದೆ ಹೆಜ್ಜೆಯಿಟ್ಟಂತೆ ಯಾರೋ ಕಾಗದದ ಉಂಡೆ ಮಾಡಿ ನನ್ನ ಮೇಲೆಸೆದರು. ಅದು ನನ್ನ ಕತ್ತಿಗೆ.ತಾಕಿ ಕೆಳಗೆ ಬಿತ್ತು.

''ತೆಗೊಂಡು ಓದಯ್ಯಾ !'' ಎಂದು ಒಬ್ಬ ಕೂಗಿದ.

''ಅದು ಪ್ರೇಮಪತ್ರವಾದರೆ ತಾನೇ ಓದಲು !'' ಇನ್ನೊಬ್ಬ ಕೂಗಿದ.

ಇಬ್ಬರೂ ನೋಡಲು ಗೂಂಡಾಗಳಂತಿದ್ದರು. ಅವರಲ್ಲೊಬ್ಬ ನನಗೆ ಗೊತ್ತು. ಅವನು ಸುಬ್ಬಯ್ಯ ರೋಡಿನಲ್ಲಿದ್ದ. ಅವನ ಹೆಸರು ರಾಮುಸ್ವಾಮಿ. ದಪ್ಪಗೆ ಬುಲ್‌ಡಾಗಿನಂತೆ ಮುಖಕ್ಕೆ ಒಂದು ಕನ್ನಡಕ ತೂಗುಹಾಕಿದ್ದ. ಮೈ ಅಡ್ಡಗಲ ಬೆಳೆಯುವುದರಲ್ಲಿ ಯಾವ ಮಿತಿಯನ್ನೂ ಇಟ್ಟುಕೊಂಡಿರಲಿಲ್ಲ. ಅವನನ್ನು ಎಲ್ಲರೂ ''ಸುಬ್ಬಯ್ಯ ರಸ್ತೆಯ ನಾಯಿ'' ಎಂದೇ ಕರೆಯುತ್ತಿದ್ದುದು. ಮೋರಿಯ ಪಕ್ಕದಲ್ಲೊಂದು ಕಲ್ಲಿನಮೇಲೆ ಬಿಸಿಲು ಕಾಯುತ್ತಾ ಕೂತು ಬೀದಿಯಲ್ಲಿ ಹೋಗುವ ಹೆಂಗಸರನ್ನೆಲ್ಲಾ ಕೀಟಲೆ ಮಾಡುವುದು, ಗಂಡಸರಮೇಲೆಲ್ಲಾ ವಕ್ರವಕ್ರವಾಗಿ ಟೀಕೆ ಮಾಡುವುದು ಅವನ ನಿತ್ಯಕಾರ್ಯ. ತಾನು ನಡೆಸುತ್ತಿರುವ ಕೆಲಸದಷ್ಟು ಹಿರಿಯದು ಯಾವುದೂ ಇಲ್ಲ. ತನ್ನನ್ನು ಬಿಟ್ಟರೆ ದೊಡ್ಡ ಮನುಷ್ಯರೇ ಇಲ್ಲವೆಂದು ಹೆಮ್ಮೆ. ಬಿ.ಎ. ಯಲ್ಲಿ ಎರಡನೆಯ ವರ್ಷ ಲಾಗಹಾಕಿ ಮೂರನೆಯ ದಂಡಯಾತ್ರೆಗೆ ಸಿದ್ಧನಾಗುತ್ತಿದ್ದ. ಇಂತಹ ನಾಯಿ ಕಂಡಕಂಡವರನ್ನು ಬೊಗಳುವುದು ಸಹಜವೇ ಎಂದುಕೊಂಡು ಸುಮ್ಮನೆ ನಡೆದೆ. ಆದರೂ ಅವರ ಮಾತಿನಿಂದ ನನಗೆ ಮನಸ್ಸು ಅಳುಕಿತು.

ಮುಂದೆ ಹೋದಂತೆ ನನ್ನ ಸಹಪಾಠಿಗಳು ಜತೆಯಲ್ಲಿ ನಿಂತಿದ್ದರು. ಅವರ ಹತ್ತಿರ ಹೋದೊಡನೆಯೇ ಎಲ್ಲರೂ ಮಾತಿಲ್ಲದೆ ನಿಂತರು. ನನ್ನ ವಿಷಯವನ್ನೇ ಮಾತನಾಡುತ್ತಿದ್ದವರು ಈಗ ನಾನು ಬಂದುದರಿಂದ ಹಿಂದೇಟು ಹೊಡೆದು ಮಾತು ನಿಲ್ಲಿಸಿದರು. ಕಾರಣವಿಲ್ಲದ ಕಾರಣ ಹೇಳಿ

ಕೊಂಚ ಹೊತ್ತಿನಲ್ಲೇ ನನ್ನ ಕಡೆಗೆ ಕಣ್ಣಿಟ್ಟು ಮಾತಾಡಿಕೊಳ್ಳುತ್ತಿದ್ದರು. ನನಗೆ ಅನುಮಾನ ಬಲವಾಯಿತು!

ಎರಡನೆಯ 'ಪೀರಿಯಡು' ಎಲ್ಲರೂ ಒಂದೇಪಾಠಕ್ಕೆ ಹೋಗಬೇಕಾಗಿತ್ತು. ನಾನು ತರಗತಿಯೊಳಕ್ಕೆಹೋಗುತ್ತಿದ್ದಂತೆಯೇ ಯಾರೋ ಒಂದಿಬ್ಬರು ಸಿಳ್ಳೆಹಾಕಿದರು. ಕೆಲವರು ಜೋರಾಗಿ ಗಹಗಹಿಸಿ ನಕ್ಕರು. ಒಬ್ಬನಂತೂ "ಕೋಳಿಕಳ್ಳ" ಎಂದೇ ಕೂಗಿಕೊಂಡ. ನಾನು ಬೆಂಚಿನಮೇಲೆ ಕುಳಿತು ಬೋರ್ಡಿನ ಕಡೆಗೆ ನೋಡಿದೆ. "ಯಮುನಾ ವಿಹಾರಿ" ಎನ್ನುವ ಚಲನ ಚಿತ್ರದ ದೊಡ್ಡದೊಂದು ಚೀಟಿಯನ್ನು ಬೋರ್ಡಿಗೆ ಅಂಟಿಸಿಬಿಟ್ಟಿದ್ದರು. ಕಲ್ಲಚ್ಚುಮಾಡಿದ ಕಾಗದವೊಂದನ್ನು ಉಂಡೆಯನ್ನಾಗಿ ಮಾಡಿ ನನ್ನಮೇಲೆ ಎಸೆದರು. ಅದನ್ನು ಬಿಚ್ಚುತ್ತಿದ್ದಂತೆಯೇ ನನಗೆ ಎದೆಯೊಡೆದಂತಾಯಿತು. ಕಣ್ಣು ಕಗ್ಗತ್ತಲಾಯಿತು. ಯಮುನಾ ಹಾಸನದಿಂದ ಬರೆದ ಕಾಗದದ ಹಲವಾರು ವಾಕ್ಯಗಳನ್ನೂ ಪದಗಳನ್ನೂ ಅಸಂಬದ್ಧವಾಗಿ ಸೇರಿಸಿ ಕೆಟ್ಟ ಕಾಗದ ಮಾಡಿದ್ದರು. ಅಂದು ಕ್ಷೌರಮಾಡಿಕೊಳ್ಳುವಾಗ ಕಳೆದುಹೋದ ಕಾಗದ ಯಾರ ಕೈಗೊ ಸಿಕ್ಕಿತ್ತು. ಅವರು ತಮ್ಮ ಸುಪ್ತನಾದ ಬಯಕೆಯ ತೀರಿಕೆಗಾಗಿ ಈ ಬಗೆಯ ಆರೋಪಮಾಡುತ್ತಿದ್ದರು. ಕಾಗದ ಓದುತ್ತಿದ್ದಂತೆಯೇ ನನಗೆ ಕಣ್ಣಿನಲ್ಲಿ ನೀರು ಹನಿಯಿತು. ಅಲ್ಲಿ ಕುಳಿತಿರುವಂತೆಯೂ ಇಲ್ಲ. ಎದ್ದು ಹೋಗುವಂತೆಯೂ ಇಲ್ಲ. ಏನು ಮಾಡಲೂ ನನಗೆ ತೋಚಲಿಲ್ಲ. ನನ್ನ ದುರದೃಷ್ಟಕ್ಕೆ ಆದಿನ ಶ್ಯಾಮ್ ಕಾಲೇಜಿಗೆ ಬಂದಿರಲಿಲ್ಲ. ಹಾಗೂ ಹೀಗೂ ಬಹಳ ಧೈರ್ಯಮಾಡಿ ಹೊರಕ್ಕೆ ಹೋಗಿಬಿಡೋಣವೆಂದುಕೊಂಡೆ. ಆ ವೇಳೆಗೆ ಸರಿಯಾಗಿ ಅಧ್ಯಾಪಕರೂ ಹುಡುಗಿಯರೂ ಒಳಕ್ಕೆ ಬಂದರು. ಎಲ್ಲರ ದೃಷ್ಟಿಯೂ ಬೋರ್ಡಿನ ಮೇಲೆ ಹೋಗಿ ಅನಂತರ ನನ್ನ ಕಡೆಗೆ ಬಂತು. ಎಲ್ಲರೂ ನನ್ನನ್ನೇ ನೋಡುತ್ತಿದ್ದರು. ದ್ವೇಷದ ಸಂತೋಷ, ಮತ್ತೊಬ್ಬರ ನೋವಿನಿಂದ ಉಂಟಾಗುವ ಆನಂದ ಅಲ್ಲಿದ್ದವರೆಲ್ಲರ ಮುಖದಲ್ಲೂ ಕಾಣಿಸಿತು. ಸುತ್ತೆಲ್ಲ ತೋಳಗಳು ಹಲ್ಲಿರಿದು ನಿಂತಂತೆ ನನ್ನಗನ್ನಿಸಿತು. ಅವರಿಂದ ಹೇಗಾದರೂ ತಪ್ಪಿಸಿಕೊಂಡರೆ ಸಾಕಲ್ಲ ಎಂದು ಒದ್ದಾಡಿದೆ. ಆದರೆ ತರಗತಿಯಿಂದ ಎದ್ದುಹೋಗಲು ಕಾಲೇ ಏಳದು. ಕುಳಿತಿರಲು ಧೈರ್ಯ ಸಾಲದು.

ಅವರೆಲ್ಲರ ಮೇಲಿನ ದ್ವೇಷದಲ್ಲಿ ಹೃದಯ ಬೆಂಕಿಯ ಬೆಟ್ಟವಾಗಿತ್ತು. ಆದರೆ ನಿಟ್ಟುಸಿರು, ಕಣ್ಣೀರಲ್ಲದೆ ಮತ್ತೇನೂ ಅದರಿಂದ ಹೊರಬೀಳುತ್ತಿರಲಿಲ್ಲ. ಏನಾದರೂ ಸರಿ, ಕುಳಿತೇ ಇರೋಣವೆಂದರೆ ಎಲ್ಲರ ತಿರಸ್ಕಾರ, ತಾತ್ಸಾರ ಗಳನ್ನು ಸಹಿಸುವುದು ಸಾಗುತ್ತಿರಲಿಲ್ಲ. ಒಂದೇಸಮನೆ ಧಮನಿ ಧಮನಿಯಲ್ಲಿಯೂ ರಕ್ತ ಕುಣಿಯುತ್ತಿತ್ತು. ಅಧ್ಯಾಪಕರಾದರೂ ಏನೂ ಆಗದವರಂತೆ ಪಾಠಮಾಡಿಕೊಂಡು ಹೋಗಲಿಲ್ಲ. ಬೋರ್ಡಿನ ಕಡೆಗೊಮ್ಮೆ ನೋಡಿ ನಕ್ಕರು. ಆ ನಗೆ ನನಗಂತೂ ಕಿರಾತನಗೆಯಂತೆ ತೋರಿತು. ತರಗತಿಗೆ ತರಗತಿಯೇ ಗಹಗಹಿಸಿತು. ನಾಚಿಕೆ, ಲಜ್ಜೆ, ಬಿಂಕಗಳನ್ನು ತೋರಿಸುವ ಹುಡುಗಿಯರೂ ಜೋರಾಗಿ ನಕ್ಕರು. ಆ ನಗೆಯ ಒಡಕು ದನಿಯಲ್ಲಿ ವಿಕಟ ಸಂತೋಷ ಕಾಣಿಸಿಕೊಳ್ಳುತ್ತಿತ್ತು. ನನಗೆ ಇನ್ನು ತಡೆಯಲಾಗಲಿಲ್ಲ. ಅಲ್ಲಿಂದೆದ್ದು ಬಿರಬಿರನೆ ಹೊರಗೆ ನಡೆದುಬಿಟ್ಟೆ. ನಾನು ಹೊರಗೆ ಕಾಲಿಟ್ಟಂತೆ ತರಗತಿಯೊಳಗೆ ನಗು ಜೋರಾಯಿತು. ಆ ಸದ್ದಿಗಿಂತಲೂ ತಲೆಯಲ್ಲಿ ಕುದಿಯುತ್ತಿದ್ದ ರಕ್ತದ ದನಿ ಜೋರಾಗಿತ್ತು!

ನಾನು ಹೊರಕ್ಕೆ ಬಂದಮೇಲೆ ಅಧ್ಯಾಪಕರು 'ಏನು ವಿಚಾರ'ವೆಂದು ಹುಡುಗರನ್ನು ಕೇಳಿದರು. ಅವರು ಮೊದಲು ಮೊದಲು ಹೇಳಲು ಹಿಂಜರಿದರೂ ಒಬ್ಬ ಧೈರ್ಯವಾಗಿ ಹೋಗಿ ಕಲ್ಲಚ್ಚಿನ ಕಾಗದದ ಪ್ರತಿಯೊಂದನ್ನು ಅವರಿಗೆ ಕೊಟ್ಟ. ಅವರು ಅದನ್ನು ಓದಿಕೊಂಡು ಜೇಬಿನಲ್ಲಿಟ್ಟುಕೊಂಡರು. ಹುಡುಗಿಯರಲ್ಲಿ ಒಬ್ಬಬ್ಬರ ಹತ್ತಿರ ಈ ಕಾಗದದ ಪ್ರತಿಗಳಾಗಲೇ ಇದ್ದುವು. ಅವರ ಕೋಣೆಯಲ್ಲಿ ಯಾರೋ ಯಮುನೆಯನ್ನು ಕಂಡರಾಗದವರು ಈ ಕಾಗದವನ್ನು ಹಂಚಿದ್ದರು. ಅಧ್ಯಾಪಕರು ಹೆಣ್ಣುಮಕ್ಕಳನ್ನು ಕಳುಹಿಸಿಬಿಟ್ಟು ಹುಡುಗರನ್ನು ವಿಚಾರಿಸಿದರು. "ಇದು ಎಲ್ಲಿಂದ ಬಂತು? ಹೇಗೆ ಬಂತು?." ಎಂದು ಕೇಳಿದರು.

"ನನಗೆ ನನ್ನ ಸ್ನೇಹಿತ ಕೊಟ್ಟ" ಎಂದ ಅವರಿಗೆ ಕಾಗದ ಕೊಟ್ಟವನು.

"ಯಾರು ?"

"ಸೀನಿಯರ್ ಬಿ. ಎ. ಯಲ್ಲಿದ್ದಾನೆ"

''ಅವನ ಹೆಸರೇನು?''

''ರಾಮುಸ್ವಾಮಿ''

ಅಧ್ಯಾಪಕರು ತರಗತಿಯನ್ನು ಬಿಟ್ಟು ಆಫೀಸಿಗೆ ನಡೆದರು. ತಕ್ಷಣವೇ ಸೀನಿಯರ್ ಬಿ.ಎ.ತರಗತಿಗೆ ಒಂದು ಕಾಗದ ಬರೆದು ರಾಮುಸ್ವಾಮಿಯನ್ನು ಕರೆಸಿಕೊಂಡರು. ಸುಬ್ಬಯ್ಯ ರಸ್ತೆಯ ನಾಯಿಯೆನ್ನಿಸಿಕೊಳ್ಳುತ್ತಿದ್ದ ರಾಮುಸ್ವಾಮಿಯೇ ಈ ಕಾಗದದ ಅಪಪ್ರಚಾರ ನಡೆಸುತ್ತಿದ್ದವನು. ಪ್ರಿನ್ಸಿಪಾಲರು ಅವನನ್ನು ಸಿಕ್ಕಿದಂತೆಲ್ಲಾ ಬೈದು, ವಿಶ್ವವಿದ್ಯಾನಿಲಯಕ್ಕೆ ವರದಿಮಾಡಿ ಅವನಿಗೆ ಶಿಕ್ಷೆಮಾಡಿಸುವೆನೆಂದು ಹೆದರಿಸಿದಾಗ, ತನ್ನ ಹತ್ತಿರವಿದ್ದ ಕಾಗದ ತೋರಿಸಿದನಂತೆ. ಪ್ರಿನ್ಸಿಪಾಲರು ಆ ಕಾಗದವನ್ನು ತೆಗೆದಿಟ್ಟುಕೊಂಡರು. ತಿರುಗಿ ಹೀಗೆ ಮಾಡಕೂಡದೆಂದು ಅವನಿಗೆ ಎಚ್ಚರಿಕೆ ಕೊಟ್ಟು ಹೊರಕ್ಕೆ ಓಡಿಸಿದರು. ನನಗೆ ಹೇಳಿಕಳುಹಿಸಿದರು. ಆದರೆ ಆಗ ನಾನು ಮನೆಗೆ ಹೊರಟು ಹೋಗಿದ್ದೆ!

ಆದಿನವೆಲ್ಲಾ ನನಗೆ ಒಂದೇಸಮನಾಗಿ ಯೋಚನೆ. ಎಂತಹ ಕೆಲಸವಾಗಿಹೋಯಿತು. ಆ ಕಾಗದವನ್ನು ಹುಷಾರಾಗಿ ತೆಗೆದಿಟ್ಟುಕೊಳ್ಳದೆ ಎಷ್ಟೊಂದು ಅನರ್ಥಕ್ಕೆ ಕಾರಣ ಮಾಡಿಕೊಟ್ಟೆನೆಂದು ನನ್ನನ್ನೇ ನಾನು ಬೈದುಕೊಂಡೆ. ಪಾಪ! ಯಮುನಾ ಎಷ್ಟು ಅವಮಾನಪಟ್ಟಿರಬೇಕು! ಇದರಿಂದ ಅವಳಿಗೆ ಎಷ್ಟು ಬೈಗಳು, ತಿರಸ್ಕಾರ, ಕೆಟ್ಟ ಹೆಸರು! ನಮ್ಮ ಸಮಾಜದಲ್ಲಿ ಗಂಡಸು ಕೆಟ್ಟರೂ ಚಿಂತೆಯಿಲ್ಲ. ತಿರುಗಿ ದಾರಿಗೆ ಬಂದರೆ ಸಭ್ಯಸ್ಥನಾಗುತ್ತಾನೆ. ಸೂಳೆಗಾರಿಕೆ ನಡೆಸಿ ಒಳ್ಳೆಯವನಾಗಿ ಸನ್ಯಾಸ ತೆಗೆದು ದೇವರಾಗುತ್ತಾನೆ. ಆದರೆ ಹೆಂಗಸಿಗೆ ಕೆಟ್ಟ ಹೆಸರು ಒಂದು ಸಾರಿ ಅಂಟಿದರೆ ಸಾಕು. ಮೈಮೇಲಾದ ಸಿಡುಬಿನ ಕಲೆಯಹಾಗೆ ಸಾಯುವವರೆಗೂ ಅವಳನ್ನು ಅದು ಬಿಡುವುದಿಲ್ಲ. ಯಮುನೆಯ ಮನೆಯವರು ಕೇಳಿದರೆ ಏನೆಂದುಕೊಂಡಾರು? ಯಮುನೆಗೆ ಮದುವೆಗೆ ಬೇರೆ ಸಿದ್ಧತೆಯಾಗುತ್ತಿತ್ತು. ಗಂಡಿನ ಕಡೆಯವರಿಗೇನಾದರೂ ತಿಳಿದರೆ ಅವರು ಏನೆಂದುಕೊಳ್ಳಬೇಡ! ನನಗೆ ಈ ಯೋಚನೆಯೆಲ್ಲಾ ಸೇರಿ ಹುಚ್ಚು ಹಿಡಿದಂತಾಯಿತು.

ಯಮುನಾ ಕಾಲೇಜಿನಿಂದ ಮೊದಲನೆಯ ಗಂಟೆಯಲ್ಲೇ ಬಂದು ಅಳುತ್ತಾ ತನ್ನ ಕೋಣೆ ಸೇರಿಬಿಟ್ಟಿದ್ದಳು. ಇಲ್ಲದ ಸಲ್ಲದ ಆರೋಪ

ತನ್ನ ಮೇಲೆ ಬಂದಿದೆಯಲ್ಲಾ ಎಂದು ಅವಳಿಗೆ ದುಃಖ. ಒಂದು ಕಡೆ ಕೋಪ, ಒಂದುಕಡೆ ದುಃಖ.ಆದರೆ ಅವಳೇನು ತಾನೇ ಮಾಡಲು ಸಾಧ್ಯ. ಅಪವಾದವೇನೋ ಎದ್ದುಬಿಟ್ಟಿದೆ. ಅವಳ ಸ್ನೇಹಿತೆಯರು ಕೂಡ ಅದನ್ನು ನಂಬಿದ್ದರು. ಕಾಲೇಜಿನಲ್ಲಿ ಒಬ್ಬಳು—ಅವಳ ಬಹಳ ಹತ್ತಿರದ ಸ್ನೇಹಿತೆ "ನಿಜ ಹೇಳೇ ಯಮುನಾ, ಇದು ನಿಜವೇನೇ?" ಎಂದೂ ಕೇಳಿಬಿಟ್ಟಿದ್ದಳು. ಏನು ಉತ್ತರ ಕೊಟ್ಟರೂ ಒಂದೇ. ಮೊದಲೇ ಆ ಕಾಗದ ನಿಜವೆಂದು ನಂಬಿ ಆಮೇಲೆ ಪ್ರಶ್ನಿಸಿ ಏನು ಪ್ರಯೋಜನ! ಅಂತೂ ಆದಿನವೆಲ್ಲಾ ಯಮುನಾ ಅಳುತ್ತಾ ತನ್ನ ಕೋಣೆಯಲ್ಲಿ ಕುಳಿತುಬಿಟ್ಟಿದ್ದಳು. ಸಂಜೆ ಲಲಿತಾ ಕಾಲೇಜಿನಿಂದ ಬಂದಾಗ ಅವಳೊಂದಿಗೆ ಎಲ್ಲವನ್ನೂ ಹೇಳಿಕೊಂಡು ಅತ್ತಳು.

ಮಾರನೆಯ ದಿನ ಪ್ರಿನ್ಸಿಪಾಲರು ನನ್ನನ್ನೂ ಯಮುನೆಯನ್ನೂ ಕರೆಸಿಕೊಂಡು ನಮಗೆ ಉಪದೇಶಮಾಡಿದರು.ಅವರು ಕೂಡ ಕಾಗದವನ್ನು ಅಪಾರ್ಥಮಾಡಿಕೊಂಡಿದ್ದರೆಂದು ನನಗೆ ತಿಳಿಯಿತು. ಯುವಕಯುವತಿಯರು ಹುಷಾರಾಗಿರಬೇಕು. ಯಾವುದಿದ್ದರೂ, ನಂಟತನ, ಸಂಬಂಧ ತಮ್ಮ ಮನೆಗಳಲ್ಲಿ. ಕಾಲೇಜಿಗೆ ಕೆಟ್ಟ ಹೆಸರು ತರಬಾರದು. ಹುಷಾರಾಗಿರಬೇಕು ಎಂದು ನಮಗೆ ಉಪದೇಶಮಾಡಿದರು. ಯಮುನೆಯ ಕಾಗದವನ್ನು ನನಗೆ ಹಿಂತಿರುಗಿ ಕೊಟ್ಟರು ಆ ಕಾಗದ ಇನ್ನೂ ನನ್ನ ಹತ್ತಿರವಲ್ಲೇ ಇದೆ.

ಇದಾದ ಐದಾರುದಿನ ಅಪವಾದದ ಕಾವು ತಗ್ಗಲೆಂದು ನಾನು ಕಾಲೇಜಿನ ಕಡೆಗೇ ಹೋಗಲಿಲ್ಲ. ಶ್ಯಾಮ್ ಮಾತ್ರ ಕಾಲೇಜನಿಂದ ಮನೆಗೆ ಹೋಗುವಾಗ ನನ್ನನ್ನು ನೋಡಿಕೊಂಡು ಹೋಗುತ್ತಿದ್ದ. ಅವನು ಕಾಲೇಜಿನಲ್ಲಿ ಆಗುತ್ತಿದ್ದ ಹರಟೆಯನ್ನೆಲ್ಲಾ ನನಗೆ ಹೇಳುತ್ತಿದ್ದ. ಅವನಿಗೆ ಅಪವಾದದಲ್ಲಿ ನಂಬುಗೆ ಇತ್ತೋ ಇಲ್ಲವೊ ಹೇಳಲಾರೆ. ಆಗೇನೋ ಅವನು ನನಗೆ ಬಹಳ ಸಮಾಧಾನ ಹೇಳುತ್ತಿದ್ದ. ಆಗದವರ ಹೊಟ್ಟೆ ಉರಿಯುತ್ತೆ. ಅದನ್ನು ತಗ್ಗಿಸಿಕೊಳ್ಳಲು ಅವರಿಗೆ ಬೇರೆ ಉಪಾಯವಿಲ್ಲ. ಅದಕ್ಕೋಸ್ಕರ ಏನಾದರೂ ಒಂದು ಅಪವಾದವನ್ನು ತಂದು ಹಾಕುತ್ತಾರೆ. ಇಂತಹುದಕ್ಕೆಲ್ಲ ಹೆದರಿಕೊಳ್ಳಬಾರದೆಂದು ನನಗೆ ಹೇಳಿದ ಆದರೆ ಅವನು ನಿಜವಾಗಿಯೂ ಹಾಗೆ ತಿಳಿದುಕೊಂಡಿರುವನೇ ಎಂದು ನನಗೆ ಅನುಮಾನವಾಯಿತು.

ಆಗಂತೂ ಎಲ್ಲರೂ ನನ್ನ ಮೇಲಿನ ಅಪವಾದವನ್ನು ನಿಜವೆಂದೇ ನಂಬಿದ್ದ ಸಮಯ. ಅಂತಹುದರಲ್ಲಿ ಅವನು ನಂಬದಿರುವನೇ ಎಂದು ನನಗೆ ಸಂದೇಹ.

ಹಾಗೆ ಆ ಅಪವಾದವನ್ನು ನಂಬದಿರುವವರೂ ಕೆಲವರಿರುವರೆಂದು ನನಗೆ ಮೂರನೆಯದಿನ ತಿಳಿಯಿತು. ಶ್ಯಾಮ್ ಕಾಲೇಜಿಗೆ ಹೋಗಿದ್ದ. ಅವನು ಸಾಮಾನ್ಯವಾಗಿ ನನ್ನ ಜತೆಯಲ್ಲಿ ಓಡಾಡುತ್ತಿದ್ದುದರಿಂದ ಅವನಿಗೆ ಕೇಳಿಸುವಂತೆ ನನ್ನ ಬಗ್ಗೆ ಕೆಟ್ಟಮಾತುಗಳನ್ನು ಹುಡುಗರು ಆಡುತ್ತಿದ್ದರು. ಅವನು ಕೇಳಿದರೂ ಕೇಳದವನಂತೆ ಇದ್ದು ಬಿಡುತ್ತಿದ್ದ. ಆದಿನ ಮಾತ್ರ ಹಾಗಾಗಲಿಲ್ಲ. ಐದಾರು ಜನ ಹುಡುಗರು ಲೈಬ್ರರಿಯ ಹತ್ತಿರ ನಿಂತು ಮಾತನಾಡುತ್ತಿದ್ದರು.

''ನೋಡೋ—ಅಲ್ಲಿ ಹೋಗುತ್ತಿಲ್ಲವೇ, ಜಂಭದಕೋಳಿ, ಅವನ ಸ್ನೇಹಿತನೇ ಕಣೋ ಆ ಶ್ರೀನಿವಾಸ''

''ಯಾವ ಶ್ರೀನಿವಾಸ ?''

''ಇನ್ಯಾರೋ, ನಮ್ಮ ಪ್ರೇಯಸಿ, ಯಮುನಾ ಇಲ್ಲವೇನೋ, ಅವಳ *Darling* ಉ''

ಹುಡುಗರು ಜೋರಾಗಿ ನಕ್ಕರು. ಆಗ ಲೈಬ್ರರಿಯಿಂದ ಹೊರಕ್ಕೆ ಬಂದವನು ಬೇರೊಬ್ಬ ವಿದ್ಯಾರ್ಥಿ ಅವರನ್ನು ಬೈದ ''ಮನುಷ್ಯರೆಂದು ಹೇಳಿಸಿಕೊಳ್ಳುವ ಯೋಗ್ಯತೆಯಿಲ್ಲದ ಪಶುಗಳು ನೀವು. ನಿಮಗೇನು ಬೇರೆಯ ಕೆಲಸವೇ ಇಲ್ಲ. ನಾಯ್ಗಿಗಳಾದರೂ ವಾಸಿ, ಒಂದೊಂದು ಸಾರಿ ಬೊಗಳುವುದನ್ನು ಬಿಟ್ಟು ಅವರಿವರ ಸೇವೆಯನ್ನಾದರೂ ಮಾಡುತ್ತವೆ. ನೀವು ಅವುಗಳಿಗಿಂತಲೂ ಕಡೆ" ಎಂದು ಅವರನ್ನೆಲ್ಲ ಬೈದ.

ಮಾತಿಗೆ ಮಾತು ಹತ್ತಿತು. ಕಾಗದದ ಅಪವಾದ ಸುಳ್ಳು ಎಂದು ಅವನು ಸಾಧಿಸಿದ. ''ಯಾವ ಹೆಂಗಸೂ ಇಂತಹ ಹೊಲಸುರೀತಿಯಲ್ಲಿ ಕಾಗದ ಬರೆಯುವುದಿಲ್ಲ'' ಎಂದು ಅವನ ವಾದ.

''ಕಾಗದದ ಸರಿಯಾದ ಪ್ರತಿಯೇ ಕಲ್ಲಚ್ಚುಪ್ರತಿ'' ಎಂದು ಅವರು.

''ಹಾಗಾದರೆ ಆ ಕಾಗದ ಎಲ್ಲಿ?''

''ಅದಿಲ್ಲ''

''ಹಾಗಿದ್ದರೆ ಎಲ್ಲಾ ಸುಳ್ಳು''

''ನಂಬಿದರೆ ನಂಬು, ಬಿಟ್ಟರೆ ಬಿಡು. ಬೇಕಾದರೆ ನೀನೂ ಅವನ ಸ್ನೇಹಮಾಡಿಕೋ. ನಿನಗೂ ಅವಳು ಕಾಗದ ಬರೆಯುಬಹುದು'' ಎಂದು ಅವನನ್ನು ಅವರೆಲ್ಲ ಅಂದರು.

ಅವನು ಹತ್ತಿರದಲ್ಲೇ ಶ್ಯಾಮ್ ಹೋಗುತ್ತಿದ್ದುದನ್ನು ನೋಡಿ ಅವನ ಹತ್ತಿರ ಬಂದು ಅವನನ್ನೇ ಕೇಳಿದ.

''ರೀ, ಶ್ಯಾಮಸುಂದರ್, ಈ ಕಾಗದ ನಿಜವೇನ್ರೀ?''

ಶ್ಯಾಮ್ ಅವನ ಈ ನೇರವಾದ ಪ್ರಶ್ನೆಯಿಂದ ಅವಾಕ್ಕಾದ. ಏನು ಉತ್ತರ ಕೊಡಬೇಕೆಂದು ಅವನಿಗೆ ತಿಳಿಯಲಿಲ್ಲ. ಅವನು ಉತ್ತರ ಕೊಡಲು ತಡವರಿಸುವುದರಲ್ಲೇ ಆತ ಮಾತನಾಡಿದ ಮತ್ತೆ.

''ನಿಮ್ಮನ್ನು ಯಾಕೆ ಕೇಳಿದೆನೆಂದರೆ ನಿಮಗೆ ಅವರ ಪರಿಚಯ ಚೆನ್ನಾಗಿದೆ. ನೀವು ಅವರ ಜತೆಯಲ್ಲಿ ಇರುವುದನ್ನು ನಾನು ನೋಡಿದೇನೆ. ಆದುದರಿಂದ ನಿಮಗೆ ಗೊತ್ತಿರಬೇಕು'' ಎಂದ.

''ಕಾಗದ ಶುದ್ಧಸುಳ್ಳು. ಶ್ರೀನಿವಾಸನನ್ನು ಕಂಡರೆ ಆಗದವರು ಯಾರೋ ಮಾಡಿದ ಅಪಪ್ರಚಾರ'' ಎಂದ ಶ್ಯಾಮ್.

''ನಾನೂ ಹಾಗೆಯೇ ತಿಳಿದುಕೊಂಡಿದ್ದೆ. ಹುಡುಗರು ಬಹಳ ಕೆಟ್ಟುಹೋಗಿದ್ದಾರೆ'' ಎಂದು ಆತ ಹೊರಡಲು ಸಿದ್ಧನಾದ.

ಶ್ಯಾಮ್ ಅವನನ್ನು ತಾನೇ ಮಾತನಾಡಿಸಿದ.

''ನೀವು—ಕಾಲೇಜಿನಲ್ಲೇ ಓದುತ್ತಿದ್ದೀರಲ್ಲವೇ?''

ಅವನು ಹೊರಡಲು ಅನುವಾಗಿದ್ದವನು ಶ್ಯಾಮನೊಂದಿಗೆ ಹೆಜ್ಜೆಯಿಡಲಾರಂಭಿಸಿದ.

''ಹೌದು, ಮೂರನೆಯ ವರ್ಷದ ಆನರ್ಸ್. ಇದೊಂದುವರ್ಷ ಕಳೆದರೆ ಈ ಜನರ ಹೇಸಿಗೆಯ ಸಹವಾಸ ತಪ್ಪುತ್ತದೆ''

''ನೀವು ಪದ್ಯಗಳನ್ನು ಬರೆಯುವಿರಲ್ಲವೇ?''

''ಸರಿ, ಏನೋ ಅಲ್ಲೊಂದು ಇಲ್ಲೊಂದು ಗೀಚುವುದು ಅದನ್ನೇ ಪದ್ಯವೆನ್ನುವುದು''

''ಇಲ್ಲ, ನಿಮಗೇನೋ ವಿನಯ. ಆದರೆ ನಿಜವಾಗಿ ಪದ್ಯಗಳು ಬಹಳ ಚೆನ್ನಾಗಿವೆ''

"ಸರಿ, ಸರಿ, ನನ್ನ ಪದ್ಯವೇನು ಬಂತು, ನಿಮ್ಮ ಕಲೆಯ ಮುಂದೆ. ನೀವು ನಾಟಕದಲ್ಲಿ ಪಾತ್ರವಹಿಸುವುದನ್ನು ನೋಡಿ ನಾನು ಬಹಳ ಮೆಚ್ಚಿಕೊಂಡಿದೇನೆ. ನೀವು ನಿಜವಾಗಿಯೂ ಕಲಾವಿದರು. ನಾವೆಲ್ಲ ಏನು, ಕಾಸಿಗೆರಡು, ಕೊಸರಿಗೆ ನಾಲ್ಕು ಸಿಕ್ಕುವ ಕುಕವಿಗಳು"

"ನಿಮ್ಮ ಕವಿತೆ—'ಬಾ ಗೆಳತಿ ನನ್ನೊಡನೆ ಗಗನದಂಚಿಗೆ'— ನನಗೆ ಬಹಳ ಇಷ್ಟವಾದ ಹಾಡು. ಬರುವ ವಾರದ ಸಭೆಯಲ್ಲಿ ಅದನ್ನು ಹಾಡಬೇಕೆಂದಿದೇನೆ. ನೀವು ದಯವಿಟ್ಟು ಬಂದು ಕೇಳಬೇಕು."

"ನೀವು ಹಾಡಿದಮೇಲೆ ಕೇಳದೆ. ಹೋಗಲಿ, ನೀವಾದರೂ ನನ್ನ ಈ ಹಾಡನ್ನು ಹಾಡುತ್ತೀರಲ್ಲಾ."

"ನಿಮ್ಮ ಬೇರೆಯ ಹಾಡುಗಳನ್ನೂ ನಾನು ಎಂದಾದರೂ ನೋಡಬೇಕು"

"ಅದಕ್ಕೇನು. ಯಾವಾಗಲಾದರೂ ಪುರುಸೊತ್ತಾಗಿದ್ದಾಗ ತೋರಿಸುತ್ತೇನೆ."

ಕಾಲೇಜಿನೊಳಕ್ಕೆ ಬಂದಿದ್ದರು ಇಬ್ಬರೂ. ಶ್ಯಾಮ್ ಕವಿಗೆ ನಮಸ್ಕಾರ ಹೇಳಿ ತರಗತಿಗೆ ಹೋದ. ಕವಿಯೂ ತರಗತಿಗೆ ಹೋದ.

ಸಂಜೆ ಶ್ಯಾಮ್ ನನಗೆ ಇದನ್ನೆಲ್ಲಾ ಹೇಳಿದ. ನನ್ನ ಪರವಾಗಿ ಮಾತನಾಡಿದ ಮೇಲಂತೂ ಕವಿಯಮೇಲೆ ನನಗೆ ವಿಶ್ವಾಸ ಬಹಳ ಹೆಚ್ಚಾಯಿತು. ಅಂದು ರಾತ್ರಿ ಶ್ಯಾಮ್ ಹಾಡಿದುದು ನನಗಿನ್ನೂ ನೆನಪಿತ್ತು. ಆ ಹಾಡನ್ನು ಅವನು ಹೇಳಿದ ಹಾಗೆ ನನ್ನ ಮಲಗುವ ಕೋಣೆಯಲ್ಲಿ ದಿಂಬಿನ ಪಕ್ಕದ ಗೋಡೆಯ ಮೇಲೆ ಬರೆದುಕೊಂಡಿದ್ದೆ. ಅದೇ ಕವಿಯದು ಮತ್ತೆ ನಾಲ್ಕು ಸಾಲನ್ನು ಶ್ಯಾಮ್ ಹೇಳಿದ್ದ. ಆ ಸಾಲುಗಳನ್ನು ಅದರ ಪಕ್ಕದಲ್ಲಿಯೇ ಬರೆದಿದ್ದೆ.

"ಉಗಿಯ ನಿಲ್ದಾಣದಲಿ ನೂರಾರು ಎಡೆಯಿಂದ
ಜನರ ಜಂಗುಳಿ ನೆರೆದು ಚಣಗಳೆರಡು
ಉರುಳೆ ಹಾದಿಯ ಹಿಡಿದು ಸಾಗಿದಂತಿದೆ ಬಾಳು
ಮತ್ತೆ ಕೊಡುವೆವೆಂಬ ಬಯಕೆ ಬರಡು!"

ಶ್ಯಾಮನಿಗೆ ಅವನ್ನು ತೋರಿಸಿದೆ. ನನಗೆ ಕವಿಯ ಬರಹವನ್ನು ಪರಿಚಯ ಮಾಡಿಕೊಟ್ಟವನೇ ಶ್ಯಾಮ್. ಈಗ ಕವಿಯ ಪರಿಚಯವೂ ಅವನಿಂದಲೇ ಆಗುವಂತಿತ್ತು. ನನ್ನ ಪರವಾಗಿ ಕವಿ ಮಾತನಾಡಿದನೆಂದು ಕೇಳಿ ನನಗೆ ಅವನಲ್ಲಿ ಇನ್ನಿಲ್ಲದ ಗೌರವ ಬಂತು.

"ಅವನು ಹೇಗಿದಾನೋ"

"ಕವಿ ತಾನೇ? ನಿನಗೆ ತಿಳಿಯವೇನೋ? ಕವಿಗಳೆಲ್ಲ ವಿಚಿತ್ರ ಪ್ರಾಣಿಗಳು. ಎಲ್ಲರಿಗೂ ಒಂದು ದಾರಿಯಾದರೆ ಏಕದಂತನಿಗೆ ಬೇರೆ ದಾರಿ. ತಲೆಯ ಕೂದಲೆಲ್ಲಾ ಬಾಚಣಿಗೆ ಕಾಣದೆ ಗಾಳಿಯಲ್ಲಿ ಹಾರಾಟದ ಅಭ್ಯಾಸ ನಡೆಸುತ್ತಿವೆ. ಮುಖ ಯಾವಾಗಲೂ ಏನೋ ಯೋಚನೆ ಮಾಡುವಂತಿವೆ. ಕೊಂಚ ಕಂದುಗಪ್ಪುಬಣ್ಣ. ಕುಳ್ಳಗೆ ಇದಾನೆ. ಒಂದು ದಟ್ಟಿಪಂಚೆ-ಖಾದಿಯದು. ಮೇಲಕ್ಕೊಂದು ಅರಿತೋಳಿನ ಷರಟು. ಷರಟಿನ ಜೇಬಿನಿಂದ ಪೆನ್ನಿನ ತುದಿ ಕಪ್ಪಗೆ ಇಣುಕುತ್ತೆ. ಕೈಯಲ್ಲಿ ಯಾವಾಗ ನೋಡಿದರೂ ಹೊರಲಾರದಷ್ಟು ಪುಸ್ತಕ. ಗಡ್ಡ ಐದಾರು ದಿನಗಳ ಹುಲುಸು ಬೆಳೆ. ಅವರ ಕಡೆಗೆ ಅವನು ಗಮನವನ್ನೇ ಕೊಡುವಂತೆ ಕಾಣುವುದಿಲ್ಲ. ಆದರೆ ಬಹಳ ಬುದ್ಧಿವಂತ. ಅವನು ಓದಿರುವಷ್ಟು ಪುಸ್ತಕವನ್ನು ಕಾಲೇಜಿನ ಅಧ್ಯಾಪಕರಲ್ಲಿ ಒಬ್ಬಿಬ್ಬರನ್ನು ಬಿಟ್ಟು ಯಾರೂ ಓದಿಲ್ಲವಂತೆ. ಹಗಲೂ ರಾತ್ರಿ ಓದುತ್ತಾನಂತೆ."

"ಹಾಗಾದರೆ ಅವನೇ ಸಬ್ಜೆಕ್ಟ್ ಸ್ಕಾಲರೋ? *(Subject Scholar)*"

"ಉಹುಂ. ತಮ್ಮ ಪಾಠದ ಪುಸ್ತಕಗಳಿಗೆ ಹೆಚ್ಚಿಗೆ ಗಮನ ಕೊಡುವುದಿಲ್ಲ. ಅದೂ ಇದು ಓದುತ್ತಿರುತ್ತಾನೆ. ಅವನು ಬೇಕಾದಷ್ಟು ಪದ್ಯಗಳನ್ನು ಬರೆದಿದಾನೆ. ಪ್ರೇಮಗೀತಗಳು."

ನನಗೆ ಪ್ರೇಮಗೀತಗಳೆಂದರೆ ಬಹಳ ಇಷ್ಟ. ಯೌವನದಲ್ಲಿ ಎಲ್ಲರಿಗೂ ಹಾಗೆಯೇ. ನಮಗೂ ಬರೆಯಬೇಕು ಅನಿಸುತ್ತದೆ. ಅದೇಕೋ ಏನೋ ಬರೆಯಲು ಆಗುವುದಿಲ್ಲ. ನನ್ನ ಸಹಪಾಠಿಗಳು ಕೆಲವರು ಪ್ರೇಮಗೀತಗಳನ್ನು ಹೊಸೆಯಲು ಪ್ರಯತ್ನಿಸುತ್ತಿದ್ದುದನ್ನು ನಾನೇ ನೋಡಿದ್ದೆ. ನಾನೇನೋ ಆ ಪ್ರಯತ್ನವನ್ನು ಎಂದೂ ಮಾಡಿರಲಿಲ್ಲ. ಆದರೂ ಪ್ರೇಮಗೀತಗಳೆಂದರೆ ನನಗೆ ಬಹಳ ಪ್ರಿಯವಾದುದು.

''ಅಲ್ಲವೋ, ಹಾಗಿರುವವನು ಪ್ರೇಮಗೀತಗಳನ್ನು ಹೇಗೋ ಬರೆಯುವುದು?'' ಎಂದೆ ನಾನು ಆಶ್ಚರ್ಯದಿಂದ.

''ಅದೇ ಮತ್ತೆ, ವಿಚಿತ್ರ. ಈ ಕವಿಗಳ ವಿಷಯವೇ ಹೀಗೆ. ಯಾರನ್ನೋ ಒಬ್ಬರನ್ನು ಕಂಡು, ರತಿ, ಚಂದ್ರನಹಾಗೆ ಮುಖ, ಹಾವಿನ ಹಾಗೆ ಜಡೆ, ಮೀನಿನ ಹಾಗೆ ಕಣ್ಣು, ಸಂಪಿಗೆಯ ಹಾಗೆ ಮೂಗು, ಅಂತ ಇಲ್ಲದುದನ್ನೆಲ್ಲ ಸೇರಿಸಿ ಬರೆಯುವುದು. ಸೌಂದರ್ಯವನ್ನು ಇಲ್ಲದ ಕಡೆಯಲ್ಲಿ ಕಾಣುವುದು. ಆದರೆ ತಾವು ಮಾತ್ರ ಅದಕ್ಕೆ ವಿರುದ್ಧ.''

''ಏನೋಪ್ಪ. ನನಗಂತೂ ಗೊತ್ತೇ ಆಗುವುದಿಲ್ಲ''

''ನೋಡೋ ನೀನು. ನಾವು ಹೆಂಗಸರನ್ನು ಮೆಚ್ಚಿಸಲು ಪ್ರಯತ್ನಿಸುತ್ತೇವೆ. ನಿನಗೆ ಯಾವುದೋ ಹುಡುಗಿಯ ಮೇಲೆ ಪ್ರೀತಿ ಯಿದ್ದರೆ, ಅವಳ ಕಣ್ಣಿನಲ್ಲಿ ಎಷ್ಟು ಅಂದವಾಗಿ ಕಾಣಲು ಸಾಧ್ಯವೋ ಅಷ್ಟೂ ಅಂದವಾಗಿ ಕಾಣಲು ನೀನು ಪ್ರಯತ್ನಪಡುತ್ತೀ. ಆದರೆ ಈ ಕವಿಗಳು ಹಾಗಲ್ಲ. ಯಾರಲ್ಲಿಯೋ ಪ್ರೀತಿಯಿಟ್ಟರು ಅಂತಿಟ್ಟುಕೋ. ಅವಳ ಸೌಂದರ್ಯದ ಹಾಡಿಕೆಯಲ್ಲಿ, ಹೊಗಳಿಕೆಯಲ್ಲಿ, ಮೆಚ್ಚಿಕೆಯಲ್ಲಿ, ತಾವು ಶುಭ್ರವಾಗಿರಬೇಕು, ಅಂದವಾಗಿರಬೇಕು, ಗಡ್ಡ ಬೋಳಿಸ ಬೇಕೆಂಬುದನ್ನೆಲ್ಲಾ ಮರೆತುಬಿಡುತ್ತಾರೆ. ಅದೇ ಮತ್ತೆ ಅವರಿಗೂ ನಮಗೂ ವ್ಯತ್ಯಾಸ.''

''ಅವನ ಪರಿಚಯವನ್ನಂತೂ ಮಾಡಿಕೊಳ್ಳಬೇಕು. ಅವನು ಹೇಗಾದರೂ ಇರಲಿ'' ಎಂದೆ ನಾನು.

''ಸರಿ. ಆದರೆ ಗಾದೆಯನ್ನು ಮರೆಯಬೇಡ. ದೂರದಲ್ಲಿರುವ ಕವಿ ಮೆಚ್ಚುಗೆಗೆ ಯೋಗ್ಯ. ಪಕ್ಕದ ಕೋಣೆಗೆ ಬಂದರೆ ಹಾಸ್ಯಕ್ಕೆ ಯೋಗ್ಯ. ಹಾಗೆಯೇ ಆದೀತು''

''ಇರಲಿ, ಆದರೆ ಒಳ್ಳೆಯವನೇ ಇರಬೇಕು.''

ಅಂತೂ ಕವಿಯ ಪರಿಚಯ ಮಾಡಿಕೊಳ್ಳುವ ಆಸೆ ನನಗೆ ಬಹಳವಾಯಿತು. ಅವನ ಬಗ್ಗೆ, ಅವನ ವಿಚಿತ್ರರೀತಿಯ ವಿಚಾರವಾಗಿ ಶ್ಯಾಮ್ ಹೇಳಿದ ಮಾತಿನಿಂದ ನನ್ನ ಕುತೂಹಲ ಇನ್ನೂ ಕೆರಳಿತು. ಅವನ

ಕವಿತೆಗಳ ವಿಷಯವಾಗಿ ನನಗೀಗಾಗಲೇ ಇದ್ದ ಮೆಚ್ಚುಗೆಯ ಜತೆಗೆ, ಅವನು ನನ್ನ ಪರವಾಗಿ ಮಾತನಾಡಿದುದೂ ಸೇರಿಕೊಂಡಿತ್ತು. ನನ್ನ ಕಣ್ಣಿನಲ್ಲಿ ಆತನ ಯೋಗ್ಯತೆ ಬಹಳ ಮೇಲಿತ್ತು. ಅವನ ವಿಚಿತ್ರ ಸ್ವಭಾವ ಕೇಳಿದ ಕುತೂಹಲವೂ ಸೇರಿಕೊಂಡಿತು. ವಿಚಿತ್ರ ಪ್ರಾಣಿಗಳನ್ನು ನಾವು ನೋಡಲು ಮೃಗಶಾಲೆಗೆ ಹೋಗುವುದಿಲ್ಲವೇ? ಅದೇ ಬಗೆಯ ಕುತೂಹಲವೇ ವಿಚಿತ್ರ ಜನರನ್ನು ನೋಡುವುದರಲ್ಲಿಯೂ ಮನುಷ್ಯರಲ್ಲಿದೆ. ಅದರಿಂದಲೇ ಜನರು ಕವಿಗಳ ಪರಿಚಯ ಮಾಡಿಕೊಳ್ಳಲು ಪ್ರಯತ್ನಿಸುವುದು!

## ೯

ನಾನೂ ಕಾದಂಬರಿಗಳನ್ನು ಓದಿ ಮೆಚ್ಚಿಕೊಂಡಿರುವವನು. ಆದರೆ ಕಾದಂಬರಿಗಳಲ್ಲಿ ಬರುವ ವ್ಯಕ್ತಿಗಳು ಪಾತ್ರಪೋಷಣೆಯ ದೃಷ್ಟಿಯಿಂದ ಏಕಮುಖವಾಗಿರುತ್ತಾರೆ. ಒಂದೇ ಬಗೆಯ ದೃಷ್ಟಿಯನ್ನು, ಅಭಿಪ್ರಾಯವನ್ನು ಯಾವಾಗಲೂ ಇಟ್ಟುಕೊಂಡಿರುತ್ತಾರೆ. ಆದರೆ ಜೀವನದಲ್ಲಿ ಹಾಗಿರುವುದಿಲ್ಲ. ನಮ್ಮ ಸುತ್ತಲಿನ ವಿಷಯಗಳನ್ನು ನಾವು ಒಂದೇ ರೀತಿಯಲ್ಲಿ ನೋಡುವುದಿಲ್ಲ. ನಮ್ಮ ಸ್ನೇಹಿತರನ್ನು ಯಾವಾಗಲೂ ಒಂದೇ ವಿಶ್ವಾಸದಿಂದ ನೋಡುವುದಿಲ್ಲ. ಮನುಷ್ಯನ ಮನಸ್ಸು ಹೆಣ್ಣಿನ ಚಪಲ ಚಂಚಲ ಕಣ್ಣಿನ ನೋಟಕ್ಕಿಂತಲೂ ಚಂಚಲ. ಅದು ಈಗ ಇಟ್ಟುಕೊಂಡ ಅಭಿಪ್ರಾಯವನ್ನು ಮುಂದಿನ ನಿಮಿಷದಲ್ಲಿ ಇಟ್ಟುಕೊಂಡಿರುವುದಿಲ್ಲ. ಇದನ್ನೆಲ್ಲಾ ಯಾತಕ್ಕೆ ಹೇಳುತ್ತಿದೇನೆಂದರೆ ನಾನು ಕಾದಂಬರಿಕಾರನಲ್ಲ. ಅ.ನ.ಕೃಷ್ಣರಾಯರು, ಶಿವರಾಮಕಾರಂತರು, ವಿ. ಎಂ. ಇನಾಂದಾರ ಮುಂತಾದವರಂತೆ ಪಾತ್ರರಚನೆಮಾಡುವ ಶಕ್ತಿ ನನಗಿಲ್ಲ. ನಡೆದ ಸಂಗತಿಯನ್ನು ನಡೆದ ಹಾಗೆ ತಿಳಿಸುವುದು ಮಾತ್ರ ನನ್ನ ಕೆಲಸ.

ಕವಿಯನ್ನು ನಾನು ಪರಿಚಯ ಮಾಡಿಕೊಳ್ಳಲು ಬಹಳ ಆಸೆಪಟ್ಟೆ. ಆದರೆ ನಾನು ಕಾಲೇಜಿಗೆ ಹೋದ ಎರಡು ಮೂರು ದಿನ ಆತ ಕಾಲೇಜಗೆ ಬಂದಿರಲಿಲ್ಲ. ಅದರಿಂದ ನನ್ನ ಕುತೂಹಲ ಇನ್ನೂ ಹೆಚ್ಚಿತು. ಅವನು ಅಲ್ಲಲ್ಲಿ ಪ್ರಕಟಿಸಿದ್ದ ಒಂದೆರಡು ಪ್ರೇಮಗೀತಗಳನ್ನು ಓದಿದೆ. ಅವುಗಳನ್ನು ಲಲಿತಾ, ಯಮುನಾ ಇಬ್ಬರಿಗೂ ಹೇಳಿದೆ. ಯಮುನಾ ಅವನ ವಿಷಯವಾಗಿ ಒಂದಷ್ಟು ಸುದ್ದಿ ಹೇಳಿದಳು.ಆದು ಹೆಣ್ಣುಮಕ್ಕಳ ಕೋಣೆಯಲ್ಲಿ ಎಲ್ಲರಿಗೂ ಗೊತ್ತಿದ್ದ ವಿಷಯ.

ನಾನು ಅವನ ಪರಿಚಯ ಮಾಡಿಕೊಂಡ ದಿನವೂ ಶ್ಯಾಮನ ಪರಿಚಯದ ದಿನದಂತೆಯೇ. ಕಾಲೇಜಿನಲ್ಲಿ ಯಾವುದೋ ಸಭೆಯಾಗುತ್ತಿತ್ತು. ಆಗ ಹುಡುಗರು ಗಲಾಟೆಮಾಡುತ್ತಿದ್ದರು. ನಾಟಕವಾರಂಭವಾಗುವ ಮೊದಲು ಹಲವು ಚಿತ್ರಗೀತೆಗಳ ಮುದ್ರಿತಟ್ಟೆಗಳನ್ನು ಹಾಕಿದ್ದರು. ಆದರೆ ಹುಡುಗರು ಸಹನೆ ಮೀರಿದ್ದರು. ಕೂಗಿಕೊಳ್ಳಲಾರಂಭಿಸಿದರು. ಆಗ ರಂಗದ ತೆರೆಯ ಮುಂದೆ ಒಂದು ಮೈಕ್ರೊಫೋನಿನ ಹತ್ತಿರ ನಿಂತು ಕವಿ

ಹಾಡಲಾರಂಭಿಸಿದ. ಅವನಲ್ಲಿಬಂದು ನಿಂತಾಗ ಯಾರೋ ಎಂದುಕೊಂಡಿದ್ದೆ. ಅವನ ಧೈರ್ಯ ಅಪಾರ. ನಿಂತು ನೇರವಾಗಿ ಎರಡು ನಿಮಿಷ ಸಭೆಯನ್ನೇ ದಿಟ್ಟಿಸಿದ. ಸಭೆ ತಣ್ಣಗಾಯಿತು. ಅನಂತರ ಹಾಡಲಾರಂಭಿಸಿದ. ಕಂಠ ನಿಜವಾಗಿಯೂ ಮಧುರವಾಗಿತ್ತು. ಶ್ಯಾಮುನ ಕೊರಳು ಹೆಣ್ಣಿನ ಧ್ವನಿಯ ಅಪೂರ್ವ ಮಾಧುರ್ಯ ಪಡೆದಿತ್ತು. ಆದರೆ ಕವಿಯ ಕಂಠ ಬೇರೆ ಬಗೆಯದು. ಶ್ಯಾಮುನ ಧ್ವನಿಯಂತೆ ಬಳುಕುವ ಧ್ವನಿಯಲ್ಲ. ನಿರ್ಮಲವಾಗಿ ನೇರವಾಗಿ ಹರಿಯುವ ನದಿಯ ಗಾಂಭೀರ್ಯ ಅದರಲ್ಲಿತ್ತು. ಆಕಾಶದ ನೀಲಿಮೆಯಲ್ಲಿ ಹೊಳೆಯುವ ನಕ್ಷತ್ರದಂತೆ ಮಿನುಗುವ ಧ್ವನಿ ಶ್ಯಾಮುನದು ಗಾಂಭೀರ್ಯದಿಂದ ತೇಲುವ ಚಂದ್ರಿಕೆಯಂತೆ ನಿಲುಬೆಳಗುವ ಧ್ವನಿ ಕವಿಯದು. ಕವಿಯ ಧ್ವನಿಯಲ್ಲಿ ಏನೋ ಒಂದು ಬಗೆಯ ದುಃಖದ ಛಾಯೆ ಕಾಣುತ್ತಿತ್ತು.

'ಬಾ ಗೆಳತಿ, ನನ್ನೊಡನೆ ಗಗನದಂಚಿಗೆ
ರವಿ ಮೂಡುವ ಹೊಂಗಡಲಿನ ಮಿಂಚುಮೊಂಚಿಗೆ—'

ಅದೇ ಹಾಡು ಅಂದಿನ ರಾತ್ರಿ ಕುಕ್ಕನಹಳ್ಳಿಯ ಕೆರೆಯ ಬಳಿ ಶ್ಯಾಮ್ ಹಾಡಿದ್ದುದು. ಶ್ಯಾಮುನನ್ನೂ ನನ್ನನ್ನೂ ಹೃದಯಬಂಧದಲ್ಲಿ ಕೂಡಿಸಿದ್ದ ಹೊನ್ನುದಾರ! ನನ್ನ ಎದೆ ಒಂದೆರಡು ಬಡಿತ ನಿಲ್ಲಿಸಿತೋ, ಮರೆತಿತೋ ಎನಿಸಿತು. ಮೈ ಆ ಉದ್ವೇಗದಲ್ಲಿ ಬೆವರಿತು. ಮುಖವನ್ನೊರೆಸಿಕೊಂಡು ಮುಂದೆ ಕೇಳಿದೆ.

'ನಿನ್ನ ನೋಟಕಿಂತ ನನ್ನ ಹೃದಯ ಚಂಚಲ,
ಬೇರುಬಿಟ್ಟ ಭೀತಿಯಾಯ್ತು ಬೆಟ್ಟವನಿಚಲ,
ಅದನಳಿಸುವ ವಜ್ರವಾರಿ ಪ್ರೇಮದ ವಿಕಲ
ತರುತಲಿಹುದು ಮಧುರಸ್ವಪ್ನ ಬಾಳಿನಂಚಿಗೆ— ೧
ಬಾ ಗೆಳತಿ—'

ಭುವಿಯ ಬಂಧದಲ್ಲಿ ಸಿಲುಕಿ ಕೆಡೆದು ನಿಂತಿದೆ
ಸಾಗರದಲೆ, ಅದರಾತ್ಮದ ಕಡೆತ ಕಂತಿದೆ
ಬೇಗೆಯೆದ್ದು ಪ್ರಳಯ ತರುವ ರುದ್ರನಂತಿದೆ
ಅದ ಮರೆಸುವ ಎದೆಯುಳಿಸುವ ಸುಖದಸಂಚಿಗೆ— ೨
ಬಾ ಗೆಳತಿ—

ಸುತ್ತಲ್ಲೆವು ಕತ್ತಲೆಕುಲ ಹುತ್ತವೆದ್ದಿದೆ
ಎತ್ತೆತ್ತಲು ಬೆಳಕ ತುಣುಕು ಸತ್ತು ಬಿದ್ದಿದೆ
ತಪ್ತರೆದೆಯ ಬೇಗೆಯ ಹೆಡೆ ಮೋಡವೆದ್ದಿದೆ
ಅದರಾಚೆಯ ಮುಗಿಲಿನೊಡಲ ಒಲವಸಂಚಿ!— ೩
ಬಾ ಗೆಳತಿ—

ನೆಲ ಮುಗಿಲಿಗೆ ಕಡಲಾರತಿ ಎತ್ತುವಲ್ಲಿಗೆ,
ಬೆಳಕುಬಳ್ಳಿ ರೂಪಿಸಿರುವ ಸುತ್ತುಮಲ್ಲಿಗೆ
ದಳಗಳೆಲ್ಲ ಸಿಡಿದು ತಾರೆಯಾಗುವಲ್ಲಿಗೆ
ಕವಿಯು ಕನಸು ಕಾಣುತಿರುವ ಮೋಹವಿಂಚಿಗೆ— ೪
ಬಾ ಗೆಳತಿ—

ಕವಿ ಹಾಡಿದ ಹಾಡಿನಿಂದ ಸಭೆ ಮುಗ್ಧವಾಯಿತು. ಉಳಿದವರಿಗೆ ಏನೆನ್ನಿಸಿತೋ ಏನೋ ನನಗೆ ತಿಳಿಯದು. ಎಲ್ಲರೂ ಸ್ತಬ್ಧರಾಗಿ ಕುಳಿತಿದ್ದರು. ಸಭೆಯಲ್ಲೆಲ್ಲಾ ಇದ್ದಕ್ಕಿದ್ದಂತೆ ಒಂದು ಮಾಯೆಯ ಗಾಂಭೀರ್ಯದ ತೆರೆ ಹಾಕಿದಂತಾಯಿತು. ನನ್ನ ಮನಸ್ಸಿನಲ್ಲಿನ್ನೂ ಗೀತದ ಧ್ವನಿ ಪ್ರತಿಧ್ವನಿಗೊಳ್ಳುತ್ತಿತ್ತು. ಮುಂದಿನ ಸಾಲಿನಲ್ಲಿ ಕುಳಿತ ಲಲಿತೆಯ ಕಡೆಗೆ ಕಣ್ಣು ಓಡುತ್ತಿತ್ತು.

ನಾನು ಕೂಡಲೇ ಬಾಗಿಲಿನ ಬಳಿಯಿಂದ ಬಣ್ಣದ ಕೋಣೆಗೆ ಓಡಿದೆ. ಅಲ್ಲಿ ಶ್ಯಾಮ್ ಬಣ್ಣ ಹಚ್ಚಿಕೊಳ್ಳುತ್ತಿದ್ದ. ತಲೆಗೆ ಕೂದಲಿನ ಕಂತೆಯುನ್ನು ಹಚ್ಚಿಕೊಳ್ಳುತ್ತಿದ್ದವನು ನನ್ನನ್ನು ಕರೆದು ಕವಿಗೆ ಪರಿಚಯ ಮಾಡಿಕೊಟ್ಟ. ಕವಿಯೊಂದಿಗೆ ನಾನು ಬಣ್ಣದ ಕೋಣೆಯಿಂದ ಹೊರಕ್ಕೆ ಹೊರಟೆ.

ಕವಿಯ ಬಗ್ಗೆ ನನಗೆ ಎಲ್ಲೂ ಇಲ್ಲದ ಆದರ ಹುಟ್ಟಿತ್ತು. ನನ್ನ ಹೃದಯದ ನಾಡಿಯೊಂದನ್ನು ಆತನ ಗೀತ ಮೀಟಿತ್ತು. ಅದರಿಂದ ಏನೋ ಒಂದು ಆತ್ಮೀಯತೆ ಬೆಳೆದು ಬಂತು. ಈಗ ಅವನ ಗೀತವನ್ನು ಅವನೇ ಹಾಡಿದುದನ್ನು ಕೇಳಿದಮೇಲಂತೂ ನನಗೆ ಅವನಲ್ಲಿದ್ದ ಆದರ ಇನ್ನೂ ಹೆಚ್ಚಾಗಿತ್ತು. ಇದರಿಂದ ನಾನು ಅವನನ್ನು ಪೂಜೆಮಾಡಲು ಕೂಡ ಆ ನಿಮಿಷದಲ್ಲಿ ಸಿದ್ಧನಾಗಿದ್ದೆ.

ನಾವಿಬ್ಬರೂ ಬಣ್ಣದ ಕೋಣೆಯಿಂದ ಬಂದವರು ಕಾಲೇಜಿನ ಅಂಗಳದ ಹುಲ್ಲಿನಮೇಲೆ ಕುಳಿತೆವು. ಈ ಅಂಗಳ ಸಾಮಾನ್ಯವಾಗಿ ಸಭೆಗಳಿಗೆ ಉಪಯೋಗವಾಗುತ್ತಿತ್ತು. ಅದರಲ್ಲಿದ್ದ ಮರ—ಬೋಧಿ ವೃಕ್ಷದಂತೆ. ಎಂತೆಂತಹ ಮಹಾಪ್ರಭೃತಿಗಳೋ ಅದರ ಅಡಿಯಲ್ಲಿ, ಅದರ ನೆರಳಿನಲ್ಲಿ ಕಾಲೇಜಿನ ವಿದ್ಯಾರ್ಥಿಗಳಿಗೆ ಉಪದೇಶಮಾಡಿ, ಕಲಿಸಿ, ಕಲಿತು ಹೋಗಿದ್ದರು. ಅಲ್ಲಿಯೇ ವಿದ್ಯಾರ್ಥಿಯಾಗಿದ್ದು, ಅಲ್ಲಿಯೇ ಅಧ್ಯಾಪಕರಾಗಿ ಬೆಳೆದವರ ಬೋಧಿವೃಕ್ಷ ಅದು. ಆ ಮರ ಈಗ ಅಲ್ಲಿದೆಯೋ ಇಲ್ಲವೋ ನನಗೆ ತಿಳಿಯದು. ನಾವು ವಿದ್ಯಾರ್ಥಿಗಳಾಗಿದ್ದಾಗಲೇ ಅದಕ್ಕೆ ಬಹಳ ವಯಸ್ಸಾಗಿತ್ತು. ಆದಿದ್ದರೆ ಕಾಲೇಜಿನ ಪುಣ್ಯ. ಇಲ್ಲದಿದ್ದರೆ ವಿದ್ಯಾರ್ಥಿಗಳ ದುರ್ದೈವ. ನಾವು ಬಂದು ಕುಳಿತಾಗ ಒಳಗೆ ನಾಟಕ ಆರಂಭವಾಯಿತು. ನನಗೆ ನಾಟಕ ನೋಡುವ ಆಸೆ. ಆದರೆ ಕವಿಗೆ ಅದು ಬೇಕಿರಲಿಲ್ಲವೋ ಏನೋ. ಬೋಧಿವೃಕ್ಷದ ಕಡೆಗೆ ನಿಟ್ಟಿಸುತ್ತಾ ಕುಳಿತ.

"ಸೀನು," ಎಂದ ಕಪಿ.

ನನಗೆ ಆಶ್ಚರ್ಯವಾಯಿತು. ಇನ್ನೂ ಇದೇತಾನೆ ಪರಿಚಯ ಮಾಡಿಕೊಂಡವನು ಆಗಲೇ ಸೀನು ಎಂದು ಕರೆಯುತ್ತಿರುವನಲ್ಲಾ, ಏಕ ವಚನವನ್ನೇ ಆರಂಭಿಸುವನೋ ಎಂದುಕೊಂಡೆ. ಆದರೆ ಅವನ ಧ್ವನಿಯ ಪ್ರೀತಿ, ಆತ್ಮೀಯತೆ ನನಗೆ ಸಮಾಧಾನ, ಸಂತೋಷ ತಂದುವು.

"ನೋಡಿ, ಸೀನು, ಆ ಮರ ಇಲ್ಲಿ ಬಹುದಿನದಿಂದ ನಿಂತಿದೆ. ಅದಕ್ಕೆ ಮಾತು ಬಂದರೆ ಎಷ್ಟು ಕತೆಗಳನ್ನು ಹೇಳಬಲ್ಲುದೋ! ಎಂತೆಂತಹ ಪ್ರಚಂಡ ಸಭೆಗಳು, ವಾಗ್ಯುದ್ಧಗಳು, ಭಾಷಣಗಳನ್ನು ಕೇಳಿದೆಯೋ! ಆದರೂ ನೋಡಿ, ಎಷ್ಟು ಶಾಂತವಾಗಿ, ಯಾವುದಕ್ಕೂ ಕೊಂಚವೂ ಗಮನ ಕೊಡದಂತೆ, ತನ್ನ ಕೊಂಬೆಗಳಿಂದ ಮುಗಿಲ ಕಡೆಗೆ ತಿರುಗಿದೆ.

ನಾನೂ ಬೋಧಿವೃಕ್ಷದ ಕಡೆಗೆ ನೋಡಿದೆ. ವಿಶಾಲವಾಗಿ ಹರಹಿಕೊಂಡ ಎಲೆಯು ಮೈ. ಅಗಲವಾಗಿ ದಟ್ಟವಾಗಿ ನೆರಳು ಬಿಟ್ಟಿತ್ತು. ನಾವು ಕುಳಿತಲ್ಲಿಂದ ಚಂದ್ರನ ಬೆಳ್ಳಿ ಎಲೆಗಳ ಮೇಲೆ ರೇಕುಗಳನ್ನು ಚಿಮುಕಿಸಿದಂತೆ ಕಾಣುತ್ತಿತ್ತು. ಮೇಲೆ ಕಾಲೇಜಿನ ಮೂರನೆಯ ಮಹಡಿಯಲ್ಲಿ ಗಾಳಿಯೋಟದ ಸೂಚಕ ತಣ್ಣಗೆ ನಿದ್ದೆಮಾಡುತ್ತಿತ್ತು.

ಕವಿಯ ಮುಖದ ಮೇಲೆ ಚಂದ್ರನ ಬೆಳಕು ಬಿದ್ದಿತ್ತು. ಆ ಬೆಳಕಿನಲ್ಲಿ ಮುಖದ ಮೇಲಿದ್ದ ನೋವಿನ ನೆರಳು ಚೆನ್ನಾಗಿ ಕಾಣುತ್ತಿತ್ತು.

ಮರುದಿನ ನಾನು ಯಮುನೆಗೆ ಕವಿಯ ಬಗ್ಗೆ ವರದಿಯನ್ನೊಪ್ಪಿಸಿದೆ.

''ದೊಡ್ಡ ಕವಿ. ಬಹಳ ಪ್ರತಿಭಾವಂತ. ಅಂತಹ ವ್ಯಕ್ತಿಗಳು ಜೀವನದಲ್ಲಿ ಬಹಳ ಜನ ಸಿಗುವುದಿಲ್ಲ. ಅವನ ಪರಿಚಯ ಮಾಡಿಕೊಳ್ಳಲು ಪುಣ್ಯ ಮಾಡಿರಬೇಕು'' ಎಂದೆ.

ಯಮುನಾ ನಕ್ಕಳು. ಅವಳ ಪಕ್ಕದಲ್ಲಿ ನಿಂತಿದ್ದ ಲಲಿತೆಯೂ ನಕ್ಕಳು. ಆ ನಗೆ ನನ್ನನ್ನು ಚುಚ್ಚಿತು. ಕವಿಯ ಬಗ್ಗೆ ನಾನು ಅಷ್ಟೊಂದು ಹೊಗಳಿದುದು ಅವರಿಗೆ ಸರಿದೋರಲಿಲ್ಲ. ಅವನ ವಿಷಯವಾಗಿ ಅವರಿಗಿದ್ದ ಪೂರ್ವಾಭಿಪ್ರಾಯದಿಂದ ಅವನ ಮಾತಿಗೆ ನಕ್ಕರು.

'' ಪಾಪ !'' ಎಂದಳು ಯಮುನಾ.

''ಯಾಕೆ ?''

''ಏನೂ ಇಲ್ಲ. ಬರಿಯ ಪದ್ಯದಲ್ಲೇ ಅವನ ಈ 'ಬಾ ಗೆಳತಿ'ಗಳೆಲ್ಲ''

''ಅಂದರೆ ?''

''ಅವನು ಒಬ್ಬ ಹುಡುಗಿಯನ್ನು ಪ್ರೀತಿಸುತ್ತಿದಾನೆ. ಅವನು ಮೂರನೆಯ ಆನರ್ಸಿನಲ್ಲಿದಾನೆ, ನೋಡು. ಅವನ ಸಹಪಾಠಿಯೊಬ್ಬಳಿದಾಳೆ. ತೆಳ್ಳಗೆ ಹಂಚಿಕಡ್ಡಿಯಂತಿದಾಳೆ, ಉದ್ದವಾಗಿ, ಗಳುವಿನ ಹಾಗೆ ಚಂಪಕ ಅಂತ. ನೀನೂ ನೋಡಿದೀಯ. ನಿನ್ನೆ ನನ್ನ ಪಕ್ಕದಲ್ಲಿ ಕುಳಿತಿದ್ದಳು. ಅವಳಲ್ಲಿ ಅವನಿಗೆ ಪ್ರೇಮವಂತೆ !"

ನನಗೆ ಹೃದಯಕ್ಕೆ ಈಟಿಯಿಟ್ಟಂತಾಯಿತು. ಕವಿಗೆ ಪ್ರೇಮವೆಂದಲ್ಲ. ಆದರೆ ಯಮುನಾ ಅವನ ವಿಷಯವಾಗಿ ಇಷ್ಟು ತಿರಸ್ಕಾರದಿಂದ ಮಾತನಾಡುವಳಲ್ಲಾ ಎಂದು ದುಃಖವಾಯಿತು. ಏನೇನೂ ಸೌಂದರ್ಯವಿಲ್ಲದ ಆ ಬೊಂಬಿನಂತಿರುವ ಚಂಪಕಳನ್ನು ಅವನು ಪ್ರೀತಿಸುವನೆಂದು ಹಾಸ್ಯಮಾಡಿದಳು. ಮತ್ತೊಬ್ಬ ಹೆಣ್ಣಿನ ಸೌಂದರ್ಯವನ್ನು ಒಬ್ಬ ಹೆಣ್ಣು ಯಾವಾಗಲೂ ಹೊಗಳುವುದೇ ಇಲ್ಲ. ಊರಿಗೆ ಒಬ್ಬಳೇ ಪದ್ಮಾವತಿ, ಅದು ತಾನೇ ಎಂದು ಎಲ್ಲ ಹೆಣ್ಣುಗಳೂ ತಿಳಿದುಕೊಂಡಿರುತ್ತಾರೆ. ಅಂತೆಯೇ

ಯಮುನಾ ಚಂಪಕಳನ್ನು ತೆಗಳಿದುದು. ಆದರೆ ಕವಿಯನ್ನು ಹಾಸ್ಯ ಮಾಡಬಾರದಾಗಿತ್ತೆಂದು ನನಗೆ ಅನ್ನಿಸಿತು.

"ಕವಿಗಳೆಂದಮೇಲೆ ಪ್ರೇಮವಿದ್ದೇ ಇರುತ್ತದೆ. ಆದರೆ ಎಂತಹ ಪ್ರೇಮಗೀತ ಬರೆದಿದಾನೆ" ಎಂದೆ.

"ಅದೇನೋ ನಿಜ. ಚಂಪಕ ತಾನೇ ಹೇಳಿಕೊಂಡಳು,ಹೆಮ್ಮೆಯಿಂದ. ನನ್ನ ಬಗ್ಗೆ ಕವಿ ಬರೆದಿದಾನೆ, ಅಂತ. ಆದರೆ ಈ ಜಂಭವಿದ್ದರೂ, ಅವಳಿಗೆ ಅವನನ್ನು ಕಂಡರೆ ಆಗುವುದಿಲ್ಲ."

"ಯಾಕಂತೆ?"

"ಯಾಕೋ ತಿಳಿಯದು. ಅಂತೂ ಅವನೆಂದರೆ ಅವಳಿಗೆ ದ್ವೇಷ. ಆದರೆ ಅವನು ಅವಳಬಗ್ಗೆ ಕವಿತೆ ಬರೆಯುತ್ತಿರುವುದು ತನ್ನ ಸೌಂದರ್ಯದ ಹಿರಿಮೆಯೆಂದುಕೊಂಡಿದಾಳೆ. ಅವಳಿಗೆ ತಿಳಿಯದು ಕವಿ ಸೌಂದರ್ಯವಿಲ್ಲದ ಕಡೆಯಲ್ಲೂ ಸೌಂದರ್ಯ ಕಾಣುತ್ತಾನೆಂದು."

ಯಮುನೆಗೆ ಕವಿಯ ಬಗ್ಗೆ ಬಹಳ ಮರುಕ. ಪ್ರೀತಿಸಿದ ಹೆಣ್ಣು ಅವನನ್ನು ದ್ವೇಷಿಸುತ್ತಾಳೆ. ಎಂತಹ ನಿರಾಸೆ. ಮನಸ್ಸು ಮುರುಕು ಮುರುಕಾಗಲು ಇದೊಂದು ದುರಂತವೇ ಸಾಕು ಎನಿಸಿತು. ಯಮುನೆಯ ಮರುಕದೊಂದಿಗೆ ನನ್ನ ಹೃದಯವೂ ದನಿಯಿಟ್ಟಿತು. ಕವಿಯಬಗ್ಗೆ ನನಗೆ ಸಹಾನುಭೂತಿ ಹೆಚ್ಚಾಯಿತು. ಜತೆಗೆ ನನ್ನ ಬಗ್ಗೆ ನನಗೆ ಹೆದರಿಕೆಯಾಯಿತು. ಲಲಿತಾ ನನ್ನ ಪ್ರೇಮವನ್ನು ಅಲ್ಲಗಳೆಯದಿರಲಿ, ದೇವರೇ ಎಂದು ಮನಸ್ಸಿನಲ್ಲೇ ಪ್ರಾರ್ಥಿಸಿಕೊಂಡೆ. ಕವಿ ನನ್ನ ನೋಟದಲ್ಲಿ ಇನ್ನೂ ದೊಡ್ಡವನಾದ. ಇದಕ್ಕೆ ಕಾರಣ ಹುಡುಕುವುದು ಕಷ್ಟವಲ್ಲ. ಆಗ ನಾನು ಯುವಕ, ಪ್ರೇಮಿಯೆಂದೂ ಅಂದುಕೊಂಡಿದ್ದೆ. ಅಂತಹವರಿಗೆ ಮತ್ತೊಬ್ಬರ ಪ್ರೇಮದ ಸುತ್ತ ಯಾವುದೋ ಮೋಹದ ತೆರೆ ಕಾಣುತ್ತದೆ. ಹೊಸತು ಅನುಭವ, ಹಿರಿದು. ಜತೆಗೆ ಅದಕ್ಕಾಗಿ ತಮ್ಮ ಹೃದಯವನ್ನೇ ಬಲಿಕೊಟ್ಟವರು ಅವರು ಆದರ್ಶವಾದಿಗಳೆಂದು ಮೆಚ್ಚುಗೆ. ಆದರ್ಶವಾದಿಗಳೆಂದರೆ ಎಲ್ಲ ಯುವಕರಿಗೂ ಅಚ್ಚುಮೆಚ್ಚು. ಅವರನ್ನು ನಾಯಕರೆಂದು ಪೂಜೆಮಾಡಲೂ ಹೇಸುವುದಿಲ್ಲ. ಅಂತೆಯೇ ನನ್ನ ದೃಷ್ಟಿಯಲ್ಲಿ ಕವಿ ಬಹಳ ಹಿರಿಯವನು!

ಯಮುನೆಗೆ ಕವಿಯಲ್ಲಿದ್ದ ಮರುಕವೇ ಲಲಿತೆಗೂ ಇದ್ದಂತೆ ತೋರಿತು. ಇಬ್ಬರೂ ಅವನ ಕವಿತೆಯನ್ನೇನೋ ಮೆಚ್ಚಿಕೊಂಡಿದ್ದರು. ಆದರೆ ಅವರಿಗೆ ಹಾಸ್ಯಾಸ್ಪದವಾಗಿ ತೋರಿದುದು ಅವನ ಪ್ರೇಮ. ಚಂಪಕ ಅವನ ಪ್ರೇಮವನ್ನು ಒಲ್ಲೆನೆಂದು ಒತ್ತರಿಸಿದ್ದಳಂತೆ. ಆದರೂ ಅವನು ಮಾತ್ರ ತನ್ನ ಪ್ರೇಮ ಅವಿಚಲವೆಂದು ಅವಳಿಗೆ ಹೇಳಿದ್ದನಂತೆ. ಬದಲಾವಣೆಯಾದರೆ ಅದು ನಿಜವಾದ ಪ್ರೇಮವಲ್ಲವೇ ಅಲ್ಲವೆಂದು ಅವನ ನಿಶ್ಚಯನಂಬಿಕೆ. ಇದರಿಂದ ಯಮುನಾ ಅವನನ್ನು ಹಾಸ್ಯಮಾಡುತ್ತಿದ್ದಳು. ಆದರೆ ಈ ಹಾಸ್ಯ ಬರಿಯ ಸೋಗು ಮಾತ್ರ. ಚಂಪಕಳ ಜಾಗದಲ್ಲಿ ತಾನಿದ್ದರೆ ಚೆನ್ನಾಗಿತ್ತೆಂದು ಯಮುನೆಗೆ ಅನಿಸಿರಬೇಕು. ಇಂತಹ ಪ್ರೇಮದಲ್ಲಿ ಹೆಂಗಸರಿಗೆ—ಅದೂ ಸಾಹಿತ್ಯ, ಸಿನಿಮಾಗಳ ಸಹವಾಸದಲ್ಲಿ ಬೆಳೆದ—ಹೊಸ ಹೆಣ್ಣಿಗೆ ಆಸಕ್ತಿ ಬಹಳ.

"ನೋಡೇ, ಅವನನ್ನು ನೋಡಿದರೆ ಯಾವಾಗಲೂ *Melancholy* (ದುಃಖಿ)ಯಾಗಿ ಕಾಣುತ್ತಾನೆ. ಅವನು ಇಷ್ಟು *Romantic* (ಶೃಂಗಾರ ಹೃದಯಿ)ಯೆಂದು ಹೇಳುವುದಕ್ಕೇ ಆಗುವುದಿಲ್ಲ. ಆದರೆ ಅವನ ಕವಿತೆಗಳಂತೂ ಪೂರಾ *Romantic*" ಅಂದಳು ಯಮುನಾ.

"ಸರಿ, ನೀನು ಹೇಳೋದು. ಅವನು ಸಿಸ್ತುಗಾರನಲ್ಲ ಅಂತ"

"ಇನ್ನೊಂದು ವಿಷಯ. ಅವನು ಹೆಂಗಸರನ್ನೊಬ್ಬರನ್ನೂ ಕಣ್ಣೆತ್ತಿ ನೋಡುವುದೇ ಇಲ್ಲವಂತೆ. ಅವನು ಇರುವುದು ಹೀಗೆ-ಬರೆಯುವುದು ಹಾಗೆ"

ಯಮುನಾ ಲಲಿತಾ ಇಬ್ಬರೂ ಗೊಳ್ಳನೆ ನಕ್ಕರು.

ಅಂತೂ ಕಾಲೇಜಿನ ಹೆಣ್ಣುಮಕ್ಕಳಿಗೆ ಕವಿಯನ್ನು ಕಂಡರೆ ಒಂದು ಬಗೆಯ ತಾತ್ಸಾರವೆಂದು ತೋರಿತು. ತಮ್ಮ ಕಡೆಗೆ ಕಣ್ಣೆತ್ತಿ ನೋಡುವುದಿಲ್ಲವಲ್ಲ, ತಮ್ಮ ಅಲಂಕಾರ, ಶೃಂಗಾರವೆಲ್ಲ ಅವನ ಮುಂದೆ ನಡೆಯುವುದಿಲ್ಲವೆಂತಲೋ, ಅಥವಾ ಅವರು ಬಯಸುವಂತಹ ಚಲನ ಚಿತ್ರ ನಟರಂತಹ ವೈಶಿಷ್ಟ್ಯ ಅವನಲ್ಲಿ ಇಲ್ಲವೆಂತಲೋ, ಇಲ್ಲವೇ ಉಳಿದ ಜನರಂತೆ ಸುಂದರವಾಗಿ ಉಡುಪು ಧರಿಸಿ ತಮ್ಮನ್ನು ಮೆಚ್ಚಿಸಲು ಪ್ರಯತ್ನಿಸದೆ. ನಿರಾದರ ತೋರುವನೆಂತಲೋ ಅಂತೂ ಕವಿಯ ಬಗ್ಗೆ ಅವರಲ್ಲಿ ಕೊಂಚ ತಿರಸ್ಕಾರವಿತ್ತೆಂದು ನನಗೆ ಗೊತ್ತಾಯಿತು.

"ಅದಕ್ಕೇನು ಮಾಡುವುದು. ಅವನಿಗೆ ಒಬ್ಬಳಲ್ಲೇ ಪ್ರೇಮವಿದ್ದರೆ ಉಳಿದವರನ್ನು ಯಾಕೆ ಕಣ್ಣೆತ್ತಿನೋಡಬೇಕು?"

ನಾನು ಲಲಿತೆಯ ಕಡೆಗೆ ನೋಡುತ್ತಾ ಪ್ರಶ್ನಿಸಿದೆ. ನನ್ನ ಧ್ವನಿಯಲ್ಲಿ ದಿಟ್ಟತನವಿತ್ತು. ಅದನ್ನರಿತೋ ಏನೋ ಯಮುನ, ಲಲಿತಾ ಇಬ್ಬರೂ ನನ್ನ ಮಾತಿಗೆ ಉತ್ತರ ಕೊಡಲಿಲ್ಲ. ಅದಕ್ಕೆ ಬದಲು ಶ್ಯಾಮನ ಪಾತ್ರದ ಬಗ್ಗೆ ಮಾತಾಡಲು ಆರಂಭಿಸಿದರು. ನಾನು ಆದಿನ ಕವಿಯೊಂದಿಗೆ ಮಾತನಾಡುತ್ತಾ ಅಂಗಳದಲ್ಲಿ ಕುಳಿತಿದ್ದುದರಿಂದ ನಾಟಕ ನೋಡಿರಲಿಲ್ಲ. ಆದುದರಿಂದ ನಾಟಕದ ವಿಷಯವಾಗಿ ಅವರು ಮಾತನಾಡಿದಾಗ ಸುಮ್ಮನೆ ಕುಳಿತಿದ್ದೆ. ಆದರೆ ಶ್ಯಾಮನ ಮಾತು ಬಂದಾಗ ಲಲಿತೆಯ ಕೆನ್ನೆ ರಂಗೇರಿ ಹೊಳೆದುದು ನನ್ನ ಕಣ್ಣಿಗೆ ಬಿತ್ತು. ಮನಸ್ಸು ಮಿಡುಕಿತು.

ಮೂರನೆಯ ದಿನ ಅಕಸ್ಮಾತ್ತಾಗಿ ಕವಿ ನನಗೆ ಸಿಕ್ಕಿದ. ಕಾಣುವಾಗಲೇ ನನ್ನ ಹೃದಯ ಅವನೆಡೆಗೆ ಹರಿದುಹೋದಂತಾಯಿತು. ಅವನಲ್ಲಿ ಆಕರ್ಷಣೆ ಅದೇನಿತ್ತೋ ಅಂತೂ ಅವನ ಶಕ್ತಿಯಿಂದ ಹಿಡಿದು ನಿಲ್ಲಿಸಿದಂತಾಗುತ್ತಿತ್ತು. ಅವನ ಮಾತಿನಲ್ಲೇನೂ ಹೆಚ್ಚುಗಾರಿಕೆಯಿರಲಿಲ್ಲ. ಮಾತಾಳಿಯಲ್ಲ. ಒಂದೊಂದುಸಾರಿ ಹತ್ತುಹದಿನೈದು ನಿಮಿಷ ಮಾತಿಲ್ಲದೆ ಮೌನವಾಗಿರುತ್ತಿದ್ದ. ಆ ಮೌನ ಕೂಡ ತುಂಬುಮೌನ. ಮುಖದಲ್ಲಿ ಏನೋ ಒಂದು ಬಗೆಯ ಮಿಂಚು. ಅಂದರೆ ಮುಖ ಹೊಳೆಯುತ್ತಿತ್ತೆಂದಲ್ಲ. ದುಃಖದ ಮಿಂಚು. ಕಣ್ಣಿನಲ್ಲಿ ನೋವಿನ ಕುಣಿತ. ಜೀವನದಲ್ಲಿನ ನೋವೆಲ್ಲ ಅವನ ಕಣ್ಣಿನಲ್ಲಿಯೇ ತುಂಬಿದೆಯೆನ್ನುವಂತೆ ಕಾಣುತ್ತಿತ್ತು. ಮೋಡಿ ಹಾಕಿದಂತಾಗಿ ಅವನನ್ನೇ ದಿಟ್ಟಿಸಿ ನೋಡುವಂತಾಗುತ್ತಿತ್ತು.

"ನೋಡಿ, ಸೀನು, ಮನುಷ್ಯ ಸೂಕ್ಷ್ಮ ಹೃದಯದವನಾಗಿ ಹುಟ್ಟಬಾರದು. ಕವಿಹೃದಯವಿದ್ದಷ್ಟೂ ಕಷ್ಟ." ಎಂದ ಕವಿ. ಅವನ ಧ್ವನಿಯಲ್ಲಿ ಅಳು ಬೆರತಂತಿತ್ತು.

"ಯಾಕೆ? ಏನಾಯಿತು?" ಎಂದೆ ನಾನು ಸಹಾನುಭೂತಿಯಿಂದ.

ಶ್ಯಾಮ್ ಕವಿಯ ಗೀತವನ್ನು ಹಾಡಿದ ದಿನ 'ಹುಟ್ಟಿದರೆ ಕವಿಯಾಗಿ ಹುಟ್ಟಬೇಕು' ಎಂದಿದ್ದುದು ನೆನಪಾಯಿತು. ಆದರೆ ಕವಿ ಮಾತ್ರ ಹೀಗೆ ಹೇಳುತ್ತಿರುವನಲ್ಲ!

ಒಂದೆರಡು ನಿಮಿಷ ನನ್ನ ಮಾತಿಗೆ ಉತ್ತರವನ್ನೇ ಕೊಡಲಿಲ್ಲ. ತಲೆ ತಗ್ಗಿಸಿಕೊಂಡು ನನ್ನ ಪಕ್ಕದಲ್ಲಿ ನಡೆಯುತ್ತಿದ್ದ. ಇದ್ದಕ್ಕಿದ್ದಂತೆ ನನ್ನ ತೋಳನ್ನು ಹಿಡಿದುಕೊಂಡು ಮಾತನಾಡಲಾರಂಭಿಸಿದ.

''ನೋಡಿ, ನನ್ನದು ವಿಚಿತ್ರ ಸ್ವಭಾವ. ನಾನು ಹೆಚ್ಚಿಗೆ ಯಾರೊಂದಿಗೂ ಸೇರುವವನಲ್ಲ. ಯಾರ ಜತೆಯಲ್ಲೂ ಏನನ್ನೂ ಹೇಳುವುದಿಲ್ಲ. ಆದರೆ ನಿಮ್ಮಲ್ಲಿ ಒಂದು ರೀತಿಯ ವಿಶ್ವಾಸ, ಆತ್ಮೀಯತೆ ಬಂದಿದೆ. ಅದರಿಂದ ಹೇಳುತ್ತಿದ್ದೇನೆ.''

ಇದ್ದಕ್ಕಿದ್ದಂತೆ ಮಾತು ನಿಂತಿತು.

"ಹುಂ. ಹೇಳಿ" ನನ್ನಮೇಲೆ ವಿಶ್ವಾಸವಿಟ್ಟನಲ್ಲಾ ಕವಿ ಎಂದು ನನಗೆ ಒಂದು ಬಗೆಯ ಹೆಮ್ಮೆ.

''ಹೇಳಲೋ ಬೇಡವೋ ಎಂದು ಯೋಚಿಸುತ್ತಿದ್ದೇನೆ.''

ನನ್ನ ಹೆಮ್ಮೆಗೆ ತಣ್ಣೀರೆರಚಿದಂತಾಯಿತು. ' ಹೇಳುತ್ತೇನೆಂದು ಈಗ ತಿರುಗಿ ಹೀಗಂದರೆ! ಇದೆಂತಹ ವಿಚಿತ್ರ ಸ್ವಭಾವ! ನನಗೆ ಸ್ವಲ್ಪ ಬೇಸರವಾಯಿತು.

''ನೋಡಿ, ಹೇಳಲಿಷ್ಟವಿದ್ದರೆ ಹೇಳಿ'' ಎಂದೆ ಕೊಂಚ ಸಿಡುಕಿನಿಂದಲೇ.

ನನ್ನ ಮಾತಿನ ಸಿಡುಕು ಅವನ ಮರ್ಮ ಮುಟ್ಟಿತು.

''ನೋಡಿ, ಆಗಲೇ ನಿಮಗೆ ಕೋಪ ಬಂತು. ಇದೇ ನನ್ನ ದುರದೃಷ್ಟ. ಏನೋ ಹೇಳಲು ಹೋಗಿ ಏನೋ ಅನ್ನುವುದು. ಅದರಿಂದ ಉಳಿದವರು ತಮಗೆ ಅವಮಾನವಾಯಿತೆಂದುಕೊಂಡು ಕೋಪಗೊಳ್ಳುವುದು. ನನಗೆ ಉಳಿದವರೊಂದಿಗೆ ಹೇಗೆ ಮಾತನಾಡಬೇಕೆಂಬುದೇ ತಿಳಿಯದು. ನನ್ನನ್ನು ಎಲ್ಲರೂ ದ್ವೇಷಿಸುತ್ತಾರೆ. ಯಾರಿಗೂ ನನ್ನನ್ನು ಕಂಡರೇ ಆಗುವುದಿಲ್ಲ.''

ಕವಿಯ ಕಣ್ಣಿನಲ್ಲಿ ಹನಿಯುಕ್ಕಿತು. ನನಗೂ 'ಅಯ್ಯೋ' ಅನಿಸಿತು. ಯಾಕೆ ನಾನು ಹಾಗೆ ಸಿಡುಕಿದೆನೋ ಎಂದು ಪಶ್ಚಾತ್ತಾಪ ಬಂತು.

''ಇಲ್ಲ, ಇಲ್ಲ, ಹೇಳಿ'' ಅಂದೆ.

''ನನಗೆನಾಚಿಕೆ ಮಾತಾಡಲು. ಯಾರೊಂದಿಗೂ ಸೇರಲು ಹಿಂದೇಟು. ಅದರಿಂದ ಮಾತಾಡುವಾಗ ಉದ್ವೇಗದಲ್ಲಿ ಗಾಬರಿಗೊಂಡು ಏನೇನೋ ಅಂದುಬಿಡುತ್ತೇನೆ. ಈಗ ನನ್ನ ಸಹಪಾಠಿಗಳೂ ಹಾಗೆಯೇ!"

ಸಹಪಾಠಿಗಳ ವಿಷಯ ಬಂದೊಡನೆಯೇ ಅವನ ಕೊರಳು ನಡುಗಿತು. ನನಗೆ ಯಮುನಾ ಹೇಳಿದುದೆಲ್ಲ ನೆನಪಾಯಿತು. ಅವಳು ಹೇಳಿದುದು ನಿಜವಿರಬಹುದೇ ಎನಿಸಿತು.

"ನಿಮಗೆ ನನ್ನ ಗೀತಗಳು ಒಪ್ಪಿದುವುತಾನೇ?" ಕವಿ ತಕ್ಷಣ ಕೇಳಿದ.

"ಸೊಗಸಾಗಿದೆ. ನಾನು ನನ್ನ ಪುಸ್ತಕದಲ್ಲಿ ನಿಮ್ಮ ಮೂರುನಾಲ್ಕು ಕವಿತೆಗಳನ್ನು ಬರೆದುಕೊಂಡಿದೇನೆ."

ಕವಿಯ ಮುಖದಮೇಲೆ ಒಂದು ನಿಮಿಷ ತೃಪ್ತಿ ಮೂಡಿ ಮಾಯವಾಯಿತು.

"ನೋಡಿ, ಅದೇಕಾರಣ. ಅದನ್ನು ಹೇಗೆ ಹೇಳುವುದೋ ತಿಳಿಯದು"

ಅಂತೂ ಕವಿ ಹೇಳಿದ. ಬಹಳ ಕಷ್ಟಪಟ್ಟು ಒದ್ದಾಡಿ ಹೇಳಿಕೊಂಡ. ಬಹಳ ಬಿಚ್ಚು ಹೃದಯದವನು. ಬೇಗನೆ ಉಳಿದವರಲ್ಲಿ ನಂಬಿಕೆ ಯಿಡುವವನು. ಅಂತೆಯೇ ನನ್ನಲ್ಲಿ ಸಂಪೂರ್ಣ ನಂಬಿಕೆಯಿಟ್ಟು ತನ್ನ ಕತೆಯನ್ನೆಲ್ಲಾ ನನ್ನಲ್ಲಿ ಹೇಳಿಕೊಂಡ.

"ನಾನು ಪ್ರೇಮಗೀತಗಳನ್ನು ಬರೆಯುತ್ತಿರುವುದೆಲ್ಲಾ ತನಗೆಂದು ಆಕೆ ತಿಳಿದುಕೊಂಡಿರುವಳಂತೆ."

ಚಂಪಕಳ ಹೆಸರನ್ನು ಅವನೆತ್ತಲಿಲ್ಲ. ನಾನೇ ಅವಳ ಹೆಸರನ್ನು ಹೇಳಿದೆ.

"ಹೌದು, ಆಕೆಯೇ. ಅದು ನಾನು ಮಾಡಿದ ತಪ್ಪುಕೆಲಸ. ಒಂದು ದಿನ ನನ್ನ ಪುಸ್ತಕದಲ್ಲಿಟ್ಟಿದ್ದ ಹಾಳೆಯೊಂದು ಹಾರಿಹೋಯಿತು. ನಾನು ಕಿಟಕಿಯಿಂದಾಚೆಗೆ ನೋಡುತ್ತಿದ್ದೆ. ಮೋಡಗಳು ಗಾಳಿಯ ಒತ್ತಡಕ್ಕೆ ಸಿಕ್ಕಿ ಬಣ್ಣಬಣ್ಣದ ಆಕಾರ ತಾಳುತ್ತಿದ್ದುದನ್ನು ನೋಡಿ ಮೈಮರೆತಿದ್ದೆ. ಕಾಗದ ಹಾರಿಹೋದುದು ನನಗೆ ತಿಳಿಯಲಿಲ್ಲ. ಅದರಲ್ಲಿ ನನ್ನದೊಂದು ಪ್ರೇಮಗೀತವಿತ್ತು. ಆಕೆಯ ಕೈಗೆ ಆ ಕಾಗದ ಸಿಕ್ಕಿತ್ತು. ಆಕೆ ಆ ಪದ್ಯವನ್ನೋದಿಕೊಂಡು ತಮ್ಮ ಕೋಣೆಯ ಸ್ನೇಹಿತೆಯರಿಗೆಲ್ಲ ಅದನ್ನು ತೋರಿಸಿರಬೇಕು. ಆ ಮಧ್ಯಾಹ್ನ ನಾನು ತರಗತಿಯಿಂದ ಹೊರಬಂದಾಗ ಹೆಂಗಸರು ಪಿಸುಮಾತಾಡಿಕೊಂಡುದು ಕೇಳಿತು.

'ಇವನೇ ಕಣೆ, ಕವಿ'

'ಇವನು ಪದ್ಯ ಬೇರೆ ಬರೀತಾನೆಯೇನೇ?'

'ಏನು ಪದ್ಯಾನೋ—'

'ಇವನ ಪ್ರೇಮ! ಅಬ್ಬಾ! ಆ ಪ್ರಾಣಿ ಯಾರೋ—'

ಈ ಮಾತಿನಿಂದ ನನ್ನ ಮನಸ್ಸು ಬಹಳ ನೊಂದಿತ್ತು. ಅನಂತರ ಆಕೆ ನನ್ನ ಕಾಗದ ನನಗೆ ಹಿಂತಿರುಗಿ ಕೊಡಲು ಬಂದಾಗ, ನನಗೆ ಮನಸ್ಸು ಉದ್ವೇಗಗೊಂಡಿತು. ನಾನು ಹೆಂಗಸರೊಂದಿಗೆ ಹೆಚ್ಚು ಮಾತನಾಡಿದವನಲ್ಲ. ಗಾಬರಿ. ಕೈ ನಡುಗುತ್ತಿತ್ತು, ನಾನು ಕಾಗದ ತೆಗೆದುಕೊಂಡಾಗ—''

ಮುಖವನ್ನೊರಸಿಕೊಳ್ಳುತ್ತಾ ಕವಿ ಚಂಪಕಳಿಂದ ಪದ್ಯತೆಗೆದುಕೊಂಡ. ಅವಳು ಅವನ ಆ ಪದ್ಯವನ್ನು ಹೊಗಳಿದಳು.

'ನಿಮಗೆ ಚೆನ್ನಾಗಿ ತೋರಿತೇ?' ಕವಿ ಕೇಳಿದ.

'ಸೊಗಸಾಗಿದೆ'

'ಸದ್ಯ ನನಗೆ ಅದೇ ಯೋಚನೆಯಾಗಿತ್ತು!'

ಕವಿಯ ಈ ಮಾತಿನಿಂದ ಚಂಪಕ ಬೇರೆ ಅರ್ಥ ಮಾಡಿಕೊಂಡಳು. ತನ್ನನ್ನು ಮೆಚ್ಚಿಸಲೆಂದು ಬರೆದ ಕವಿತೆ. ತನಗಾಗಿ ಬರೆದ ಕವಿತೆ. ತನ್ನ ವಿಷಯ ಬರೆದ ಕವಿತೆ ಎಂದು ಅಪಾರ್ಥ ಮಾಡಿಕೊಂಡಳು. ಅವಳ ಹೆಣ್ಣುಮನಸ್ಸು—ಗಂಡುಸಿನ ಮೆಚ್ಚುಗೆಯನ್ನು ಪಡೆಯಲು ಹಾತೊರೆಯುತ್ತಿದ್ದುದು—ಹಿಗ್ಗಿತ್ತು. ಆದರೆ ಹಿಗ್ಗನ್ನು ಮಾಚುವುದು ಹೆಣ್ಣಿನ ಸ್ವಭಾವ. ಅವನಮೇಲೆ ಸಿಡುಕುಗೊಂಡು ಅವನನ್ನು ಬೈದು ಕಳುಹಿಸಿದಳು. ಅಲ್ಲಿಗೇ ಸುಮ್ಮನಿರದೆ ಕಾಲೇಜಿನಲ್ಲೆಲ್ಲಾ ಅವನಿಗೆ ತನ್ನ ಮೇಲೆ ಪ್ರೇಮ, ತಾನು ಅವನನ್ನು ತನ್ನ ಹೆಬ್ಬೆರಳಿನಸುತ್ತ ಆಡಿಸಬಲ್ಲೆನೆಂದು ಜಂಭ ಕೊಚ್ಚಿಕೊಳ್ಳುತ್ತಿದ್ದಳು. ಇದರಿಂದ ಅವನಿಗೆ ಬಹಳ ನೋವಾಗಿತ್ತು. ಯಾರೊಂದಿಗೂ ಆಡಿಕೊಳ್ಳದೆ ತನ್ನ ದುಃಖವನ್ನು ಒಳಗೇ ಕುದಿಸಿಕೊಳ್ಳುವ ಅಂತರ್ಮುಖಿ ಅವನು. ಯಾರಿಗಾಗಿಯೋ ಬರೆದ ಕವಿತೆಯನ್ನು ಬೇರೊಬ್ಬರು ತಮಗೆ ಬರೆದುದೆಂದು ಅಪಾರ್ಥಮಾಡಿಕೊಂಡು ಅಪಪ್ರಚಾರಮಾಡಿದುದು ಅವನಿಗೆ ಬಹಳ ದುಃಖ ತಂದಿತು.

“ಹಾಗಾದರೆ, ಆ ಕವಿತೆ, ಯಾರಿಗೋಸ್ಕರ ಬರೆದುದು?” ನಾನು ಅವನ ಕತೆಯ ನಡುವೆ ಕೇಳಿದೆ.

“ಯಾರಿಗಾಗಿಯೋ ಬರೆದೆ. ಆದರೇನು ಪ್ರಯೋಜನ. ಸುಖ ನನಗೆ ಹಣೆಯಲ್ಲಿ ಬರೆದಿಲ್ಲ. ಕೆಲವರಿಗೆ ಸುಖ ಬೇಡ ಬೇಡವೆನ್ನುವಷ್ಟು. ಕೆಲವರಿಗೆ ಸಾಕು ಸಾಕೆನ್ನಿಸುವಷ್ಟು ದುಃಖ. ಇಂತಹ ಅನ್ಯಾಯ ಏಕೋ ನನಗಂತೂ ತಿಳಿಯುವುದಿಲ್ಲ” ಎಂದ ಕವಿ.

“ಯಾಕೆ? ಈಗೇನಾಯಿತು?”

“ಇನ್ನೇನಾಗಬೇಕು. ಯಾರಿಗೋಸ್ಕರ ಬರೆದನೋ ಅವಳೇ ಇದನ್ನೊಲ್ಲದಿದ್ದರೆ?”

“ಅಂದರೆ—”

“ನಾನು ಪ್ರೀತಿಸುವ ಹುಡುಗಿಗೆ ನನ್ನಲ್ಲಿ ಪ್ರೇಮವಿದೆಯೋ ಇಲ್ಲವೋ ನನಗೆ ಅನುಮಾನ”

“ಆ ಅನುಮಾನ ತೀರಿಸಿಕೊಳ್ಳಲು ಸಾಧ್ಯವಿಲ್ಲವೇ?”

“ಹೇಗೆ ಸಾಧ್ಯ?”

ಹೇಗೆ ಸಾಧ್ಯ? ನನ್ನ ಮುಂದೆಯೂ ಅದೇ ಪ್ರಶ್ನೆ ಇತ್ತು. ಲಲಿತಾ ನನ್ನನ್ನು ಪ್ರೀತಿಸುವಳೇ ಇಲ್ಲವೇ ಎಂದು!

“ಈ ಮಧ್ಯೆ ಅವಳಿಗೆ ಅವಳ ತಂದೆ ಮದುವೆಗೆ ಏರ್ಪಾಡು ಮಾಡಬೇಕೆಂದಿದಾರೆ. ನನಗೆ ಹೇಗೋ ಗೊತ್ತಾಯಿತು. ಅವಳು ಒಪ್ಪಿದರೆ—ನನ್ನ ಗತಿ!”

ಕೊಂಚ ಹೊತ್ತು ನಾವಿಬ್ಬರೂ ಮೌನವಾಗಿದ್ದೆವು. ಮತ್ತೆ ಕವಿಯೇ ತಿರುಗಿ ಮಾತನಾಡಿದ.

“ನಾನು ಅವಳಿಗೆ ತಕ್ಕವನಲ್ಲವೆಂಬುದು ನಿಜ. ಗಂಡಸಿಗೆ ಚೆನ್ನಾದ ಹೆಂಡತಿ ಸಿಗಬೇಕೆನ್ನುವ ಆಸೆಯಿರುವಂತೆಯೇ ಹೆಂಗಸಿಗೆ ಸುಂದರನಾದ ಗಂಡ ಸಿಗಲೆನ್ನುವ ಆಸೆ. ಜತೆಗೆ ಗಂಡ ಹೆಸರು ಪಡೆದಿರಬೇಕು. ಗಣ್ಯನಾಗಿರಬೇಕು. ತುಂಬಾ ದುಡ್ಡು ತರಬೇಕೆನ್ನುವ ಆಸೆ. ನನ್ನಲ್ಲೇನಿದೆ. ನಾನೊಬ್ಬ ಸಾಮಾನ್ಯ ಪದ್ಯ ಗೀಚುವವನು. ಆದರೆ ನಾನು ಪದ್ಯ ಬರೆದಾದರೂ ಅವಳಿಗೆ ಯೋಗ್ಯನಾಗುವ ಯೋಚನೆ.”

"ನಿಮ್ಮ ಗೀತಗಳನ್ನೋದಿದರೆ ಯಾರಿಗಾದರೂ ನಿಮ್ಮನ್ನು ಮದುವೆಯಾಗಲು ಅಡ್ಡಿಯಿಲ್ಲ." ನಾನು ಸುಲಭವಾಗಿ ಹೇಳಿಬಿಟ್ಟೆ.

"ಏನೋ—ಗೀತಗಳನ್ನೋದಿ ಪ್ರೇಮ ಬರುವುದೆನ್ನುವುದೆಲ್ಲ ಕಟ್ಟು ಕತೆಗಳಲ್ಲಿ. ಆದರೂ ನಾನು ಅವಳಿಗೆ ತಕ್ಕವನಲ್ಲವೆಂಬುದು ನನಗೆ ಕೊರೆಯುತ್ತಾ ಇದೆ. ಅವಳಿಗೆ ಮದುವೆಯೂ ಆಗಿಬಿಟ್ಟರೆ ಆಯಿತು...."

ಕವಿಗೆ ಆ ಹುಡುಗಿಯಲ್ಲಿ ಎಷ್ಟು ಪ್ರೇಮವೆನ್ನುವುದು ಅವನ ನಡುಗು ದನಿಯಲ್ಲೇ ತಿಳಿಯುತ್ತಿತ್ತು. ಅವನ ಸ್ಥಿತಿ ಕಂಡು ನನಗೆ ಕಣ್ಣಿನಲ್ಲಿ ನೀರು ಬಂತು.

"ಒಂದೊಂದು ಸಾರಿ ನನಗೆ ಆತ್ಮಹತ್ಯೆ ಮಾಡಿಕೊಂಡುಬಿಡಲೇ ಎನಿಸಿದೆ"

"ಛೆ! ಇದಕ್ಕೋಸ್ಕರ!" ನಾನು ಗಾಬರಿಯಿಂದ ಅಂದೆ.

"ಒಂದೊಂದುಸಾರಿ ಹಾಗನ್ನಿಸಿದೆ. ಇನ್ನೊಂದೊಂದುಸಾರಿ ಅವಳನ್ನು ಕಂಡು ಒಂದು ತೀರ್ಮಾನಕ್ಕೆ ಬಂದುಬಿಡಲೇ ಎಂದೂ ಯೋಚನೆ"

"ಅದೇ ಸರಿ"

"ನಿಜ. ಆದರೆ ಅವಳು ನನ್ನನ್ನೊಪ್ಪುವಂತಹ ಗುಣ ನನ್ನಲ್ಲಿಲ್ಲ. ನಾನೇನನ್ನೂ ಮಾಡಿಲ್ಲ."

ನನಗಂತೂ ಏನೂ ತೋಚಲಿಲ್ಲ. ಕವಿಯ ಮನಸ್ಸು ಬಹುಬೇಗ ಚಂಚಲಗೊಳ್ಳುತ್ತಿತ್ತು. ಹೀಗಿಂದ ಹಾಗೆ ಗಡಿಯಾರದ ತೂಗುಗುಂಡಿನಂತೆ ತೂರುತ್ತಿತ್ತು. ಅವನಿಗೆ ಯಾವಬಗೆಯ ಸಮಾಧಾನ ಕೊಡಲು ಸಾಧ್ಯ?

"ಸಾಹಿತ್ಯದಲ್ಲಿ ನೀವು ಈಗಾಗಲೇ ಹೆಸರು ಮಾಡಿಕೊಂಡಿದೀರಲ್ಲ. ಈ ವರ್ಷ ಮುಗಿದರೆ ಎಲ್ಲಾದರೂ ಕೆಲಸಕ್ಕೆ ಸೇರಿಕೊಂಡರೆ ಆಯಿತು. ಏನೂ ತೊಂದರೆಯಾಗಲಾರದು."

ನನಗೇನೋ ನನ್ನ ಮಾತಿನಲ್ಲಿ ಬಹಳ ಹುರುಳಿದೆ, ಅದೇ ಸರಿ ಎನಿಸಿತು. ಆದರೆ ಆ ಮಾತು ಕವಿಗೆ ಒಪ್ಪಿದಂತೆ ತೋರಲಿಲ್ಲ. ಸುಮ್ಮನೆ ತಲೆಯಲ್ಲಾಡಿಸಿದ.

"ಉಹುಂ. ಪ್ರಯೋಜನವಿಲ್ಲ. ನನ್ನ ಪಾಲಿಗೆ ಸುಖ ಆಲದ ಹೂವು. ಆಲಕ್ಕೆ ಹೂವಿಲ್ಲವೆಂದು ತಿಳಿದೂ ತಿಳಿದೂ ಅದನ್ನು ಹುಡುಕಲು ಹೊರಟ ಮೂರ್ಖ ನಾನು. ಒಂದೊಂದು ಸಾರಿ ಯೋಚಿಸುತ್ತಾ ಇದ್ದರೆ ಆತ್ಮಹತ್ಯೆಯೊಂದೇ ಇದರಿಂದ ಬಿಡುಗಡೆ ಎಂದನ್ನಿಸುತ್ತೆ. ಸತ್ತಮೇಲಾದರೂ ಸುಖ ಸಿಗಬಹುದು."

"ಛೆ! ಛೆ! ಇದೆಂತಹ ಮಾತು. ನಿಮ್ಮಂತಹ ತಿಳಿದವರೇ ಹೀಗಂದರೆ ಹೇಗಾದೀತು!" ಎಂದು ನಾನೇನೋ ಅಂದೆ. ಬಹಳ ಹೊತ್ತು ನಾವಿಬ್ಬರೂ ಮಾತನಾಡಲಿಲ್ಲ. ಅನಂತರ ಕವಿ ಮನೆಗೆ ಹೋಗುವೆನೆಂದು ಹೇಳಿ ಹೊರಟು, ಹೋದ.

ಅವನು ಹೋದ ಎಷ್ಟೋ ಹೊತ್ತಿನವರೆಗೂ ನಾನು ಅವನ ವಿಷಯವಾಗಿಯೇ ಯೋಚಿಸುತ್ತಿದ್ದೆ. ಎಂತಹ ವಿಚಿತ್ರವ್ಯಕ್ತಿ ಎಂದಷ್ಟೇ ನನಗೆ ಅನಿಸಿದ್ದು. ಅವನಲ್ಲಿ ಬಹಳ ಸಹಾನುಭೂತಿ, ಕನಿಕರ. ಆದರೆ ಅವನು ಸುಮ್ಮನೆ ಚಿಂತೆಯನ್ನು ತಂದು ಹಾಕಿಕೊಳ್ಳುತಿದಾನೆ. ಎಂದೂ ಅನಿಸಿತು. ಬಹಳ ಸುಲಭವಾಗಿ ತೀರ್ಮಾನಿಸಬಹುದಾಗಿದ್ದ ವಿಷಯವನ್ನು ಒಂದೇ ಸಮನೆ ಯೋಚಿಸಿ ಯೋಚಿಸಿ ಯಾಕೆ ಒದ್ದಾಡಬೇಕೋ ನನಗಂತೂ ತಿಳಿಯಲಿಲ್ಲ. ಅವನಿಗೆ ಈ ಬಗೆಯ ಚಿಂತೆಯಲ್ಲಿಯೇ ಒಂದು ಸುಖವಿತ್ತೋ ಏನೋ. ಹಾಗೂ ಕೆಲವರಿದ್ದಾರೆ. ತಮಗೆ ದುಃಖವಾದಾಗಲೇ ಅವರಿಗೆ ಸುಖ. ಆ ದುಃಖವೇ ಸುಖ. ಅವರ ಬಾಳಿಗೆ ಆ ದುಃಖವೊಂದು ಆಸರೆ. ಆ ದುಃಖವನ್ನು ನೀವು ತೆಗೆದುಹಾಕಿದರೆ ಅವರ ಜೀವವೇ ಹೋದಂತಾಗುತ್ತದೆ. ಅನಂತರ ಆ ದುಃಖ ಹೋಯಿತಲ್ಲಾ ಎನ್ನುವ ದುಃಖದಿಂದ ಮತ್ತೆ ಮರುಗುತ್ತಾರೆ. ಆ ಮರುಗಿನಲ್ಲೇ ಕಾಲಕಳೆಯುತ್ತಾರೆ. ಮುಳುಗುತ್ತಾರೆ. ಕವಿಯೂ ಅಂತಹವನೇ ಏನೋ ಎಂದು ನನಗೆ ಅನಿಸಿತು. ತಾನು ಪ್ರೇಮಿಸುವ ಹುಡುಗಿಯನ್ನು ಮದುವೆಯಾಗಿ ಸುಖವಾಗಿರುವುದನ್ನು ಬಿಟ್ಟು ಇಲ್ಲದ ಅಡ್ಡಿ ಆಂತಕಗಳನ್ನು ತಂದುಕೊಂಡು ಮರುಗುತ್ತಿದ್ದ. ಆದರೂ ನನಗೆ ಅವನಲ್ಲಿ ಸಂಪೂರ್ಣ ಸಹಾನುಭೂತಿಯಿತ್ತು.

ಕವಿ ಆಕಡೆಗೆ ಹೋದ ಕೊಂಚ ಹೊತ್ತಿನಲ್ಲೇ ಶ್ಯಾಮ್ ಬಂದ. ಅವನಿಗೆ ಕವಿ ಹೇಳಿದ ವಿಷಯವನ್ನೆಲ್ಲಾ ಹೇಳಿದೆ. ಅವನು ಕವಿಯ

ಪ್ರೇಮದ ಕತೆಯನ್ನೆಲ್ಲಾ ಹೇಳಿದ. ಅವನಿಗೆ ಈ ವಿಚಾರ ಹೇಗೆ ತಿಳಿಯಿತೋ ಏನೋ. ಅವನಿಗೆ ಕವಿಯೇ ಹೇಳಿದ್ದನೋ ಏನೋ. ತನಗೆ ಈ ಕತೆ ಹೇಗೆ ತಿಳಿಯಿತೆಂಬುದನ್ನು ಶ್ಯಾಮ್ ನನಗೆ ಹೇಳಲಿಲ್ಲ. ಆದರೆ ಕವಿಯು ಪ್ರೇಮದ ಕತೆಯನ್ನಷ್ಟುಮಾತ್ರ ಹೇಳಿದ. ಅವನ ಪ್ರೇಮದ ಕತೆ ಹೇಳಿದಮೇಲೆ ನನಗೆ ಕವಿಯಲ್ಲಿ ಗೌರವ ಹೆಚ್ಚಿತು. ಆದರೆ ಅವನ ವಿಚಿತ್ರ ನಡವಳಿಕೆ ಮಾತ್ರ ನನಗೆ ಒಪ್ಪಲಿಲ್ಲ.

ಕವಿಯೊಂದಿಗೆ ನನ್ನ ಸ್ನೇಹ ಗಾಢವಾಗಿ ಬೆಳೆಯಿತು. ಹಾಗೆ ಹೇಳುವುದು ಸರಿಯಲ್ಲ. ಅವನ ಸ್ನೇಹ ನನ್ನಲ್ಲಿ ಗಾಢವಾಯಿತು. ಅವನು ಆಗಾಗ ಬಂದು ತನ್ನ ಗೋಳು ಕರೆಯುತ್ತಿದ್ದ. ಯಾವಾಗಲೂ ಮುಖದಲ್ಲಿ ದುಃಖ ಮೂಡಿರುತ್ತಿತ್ತು. ತನ್ನ ಬಾಳಿಗೆ ಸುಖವೇ ಇಲ್ಲವೆನ್ನುವ ಭ್ರಮೆ. ಈ ನಂಬಿಕೆ ಅವನ ಮುಖದಮೇಲೆ ನೋವಿನ ನೆರಳನ್ನು ತಂದುಹಾಕಿತ್ತು. ಅವನು ನನ್ನಲ್ಲಿ ಮತ್ತು ಶ್ಯಾಮನಲ್ಲಿ ಸಂಪೂರ್ಣ ನಂಬುಗೆಯಿಟ್ಟ. ನಮ್ಮಲ್ಲಿ ಬಿಚ್ಚುಹೃದಯದಿಂದನಡೆದುಕೊಳ್ಳುತ್ತಿದ್ದ. ಅವನು ಮಾತನಾಡುವಾಗೇನೋ ನಾವು ಸಹಾನುಭೂತಿ ತೋರಿಸುತ್ತಿದ್ದೆವು. ನನಗಂತೂ ಅವನ ಮಾತು ಕೇಳುವಾಗ ಹೃದಯ ಕರಗುತ್ತಿತ್ತು. ಆದರೆ ಶ್ಯಾಮನಿಗೆ ಹಾಗಲ್ಲ. ಶ್ಯಾಮ್ ಸಹಾನುಭೂತಿಯನ್ನು ನಟಿಸುತ್ತಿದ್ದ. ಕವಿ ತನ್ನ ದುಃಖಪರಂಪರೆಯನ್ನು ಹೇಳಿಕೊಂಡಮೇಲೆ ಹಾಗೂ ಹೀಗೂ ಅವನನ್ನು ನಮ್ಮಿಂದ ಕಳುಹಿಸಿಬಿಡುತ್ತಿದ್ದೆವು. ಅನಂತರ ಶ್ಯಾಮ್ ಅವನನ್ನು ಗೇಲಿಮಾಡುತ್ತಿದ್ದ. ಮನಸ್ಸುಬಂದಹಾಗೆಲ್ಲಾ ತಮಾಷೆ ಮಾಡುತ್ತಿದ್ದ. ನಾನೂ ಹಾಸ್ಯಮಾಡುತ್ತಿದ್ದೆ. ಆದರೆ ನನ್ನ ಮನಸ್ಸಿನಲ್ಲಿ ಯಾವ ತಿರಸ್ಕಾರ ಭಾವನೆಯೂ ಇರಲಿಲ್ಲ. ಆದರೆ ಶ್ಯಾಮನಿಗೆ ಮಾತ್ರ ಕವಿಯ ಬಗ್ಗೆ ತಿರಸ್ಕಾರ.

"ಇಂತಹ ಜನ ಇರಬಾರದು. ಅವರ ರಕ್ತದಲ್ಲಿ ಬರಿಯ ಬಿಳಿಯ ಕಣಗಳೇ ಇರಬೇಕು ಏನು ಸಪ್ಪೆಮುಖ! ಇರಲಿ, ಇಲ್ಲದಿರಲಿ, ತಮ್ಮ ಹೆಗಲಮೇಲೆಯೇ ಪ್ರಪಂಚದ ಹೊರೆಯೆಲ್ಲಾ ಬಿದ್ದವರಹಾಗೆ! ಮೂಸಂಡಿಗಳು!" ಎನ್ನುತ್ತಿದ್ದ.

ಆದರೆ ಕವಿ ತನ್ನ ಪಾಡು ಹೇಳಿಕೊಳ್ಳುವಾಗ ಮಾತ್ರ ಮರುಕ, ಅನುಕಂಪಗಳ ನಟನೆಮಾಡುತ್ತಿದ್ದ. ನನಗೆ ಒಂದೊಂದು ಬಾರಿ ಶ್ಯಾಮನ ಈ ಸೋಗಿನ ಮೇಲೆ ಕೋಪ ಬರುತ್ತಿತ್ತು. ಆದರೆ ಈ ಕೋಪ ಬಹಳ ಹೊತ್ತು ನಿಲ್ಲುತ್ತಿರಲಿಲ್ಲ. ಒಂದು ದಿನವಂತೂ ನನಗೆ ವಿಪರೀತ ರೇಗಿ ಶ್ಯಾಮನನ್ನು ಬೈದುದೂ ಉಂಟು. ಆದಿನ ಕವಿ ತನ್ನ ಹೊಸದೊಂದು ಕವಿತೆಯನ್ನು ತಂದು ನಮಗೆ ಓದಿದ. ಆ ಕವಿತೆಯೇನೋ ನನಗೆ ಬಹಳ ಚೆನ್ನಾಗಿದೆಯೆಂದು ತೋರಿತು.

"ನನ್ನ ಹುಡುಗಿಗೆ ಬೇರೆ ಮದುವೆ ಗೊತ್ತಾದಹಾಗೆಯೇ. ನಾನು ಅದನ್ನು ಸಹಿಸಲಾರೆ. ಆತ್ಮಹತ್ಯೆ ಮಾಡಿಕೊಳ್ಳುತ್ತೇನೆ" ಎಂದ ಕವಿ.

ಈ ಆತ್ಮಹತ್ಯೆಯ ಚಿಂತೆ ಅವನ ಮನಸ್ಸಿನಲ್ಲಿ ಯಾವಾಗಲೂ ಇತ್ತೆಂದು ತೋರುತ್ತದೆ. ಅದನ್ನೇ—ಆ ಸಾವನ್ನೇ ಬಯಸಿ ಒಂದು ಕವಿತೆ ಬರೆದಿದ್ದ. ಆ ಕವಿತೆಯ ಸಾಲುಗಳು ನನಗೆ ನೆನಪಿಲ್ಲ. ಅದರ ಅರ್ಥ ಚೆನ್ನಾಗಿ ನೆನಪಿನಲ್ಲಿದೆ. ನನ್ನ ದೃಷ್ಟಿಯಲ್ಲಿ ಅದು ಬಹಳ ಚೆನ್ನಾಗಿತ್ತು. ಎಳೆಹರಯದಲ್ಲಿ ಹೂವು ಅರಳಿದೊಡನೆಯೇ ಅದರ ಕಂಪಿನಿಂದ ಮೋಹಗೊಂಡು ದುಂಬಿ ಅದರ ಹತ್ತಿರ ಬಂದು ಗುಂಯ್ಗುಟ್ಟುವ ಹಾಗೆ, ಸಾವು ಕವಿಯ ಹರಯದ ಹೃದಯದ ಸುತ್ತ ಝೇಂಕರಿಸಿದೆ. ಕವಿ ಅದನ್ನು ಸ್ವಾಗತಿಸುತ್ತಾನೆ. ತನ್ನ ಪ್ರಿಯೆಯ ಪ್ರೇಮದ ಸುಖ ಇಲ್ಲಿ ದೊರಕದುದು ಅಲ್ಲಿ ದೊರೆಯಬಹುದೆನ್ನುವ ಹುಚ್ಚು ಆಸೆಯಿಂದ ಸಾವನ್ನು ಬರಮಾಡಿ ಕೊಳ್ಳುತ್ತಾನೆ. ಈ ಕವಿತೆಯನ್ನು ಬರೆದ ರೀತಿ ಬಹಳ ಸುಂದರವಾಗಿತ್ತು. ಅದನ್ನು ಕೇಳಿದೊಡನೆಯೇ ಶ್ಯಾಮ್ ಬೇಸರದಿಂದ ಕವಿಯ ಕಡೆಗೆ ತಿರುಗಿ "ನಿಮ್ಮ ಈ ಸಾವಿನ ಗೋಳಾಟ ಕೇಳಿ ಕೇಳಿ ಬೇಜಾರಾಯಿತು" ಎಂದ.

ಕವಿ ಇದರಿಂದ ಬಹಳ ನೊಂದುಕೊಂಡ. ಮಾತಾಡದಿದ್ದರೂ ಕಣ್ಣಿನಲ್ಲಿ ನೀರು ಕೂಡುತ್ತಿತ್ತು. ಕೆಳಗಿಳಿಯದ ಕಂಬನಿಯ ಭಾರದಿಂದ ಮುಖ ಜೋತಿತು. ನನಗೆ ಶ್ಯಾಮನಮೇಲೆ ಕೋಪ ಬಂತು.

"ಅದು ಅವರ ಅನುಭವ"

"ಹೌದು, ಯಾರಿಗೂ ಪ್ರಪಂಚದಲ್ಲಿ ಸುಖವೇ ಇಲ್ಲವೇ? ಬರಿಯ ದುಃಖವೇ?" ಎಂದ ಶ್ಯಾಮ್.

"ನಾನು ಇದುವರೆಗೆ ಸುಖ ಕಂಡುದಿಲ್ಲ" ಎಂದ ಕವಿ.

"ಅದು ಸುಳ್ಳು" ಶ್ಯಾಮ್ ಜೋರಾಗಿ ಅಂದ.

ಕವಿ ಆ ಮಾತು ಕೇಳಿದ. ಸುಮ್ಮನೆ ಒಂದುಸಾರಿ ತಲೆಯೆತ್ತಿ ನನ್ನ ಕಡೆಗೂ ಶ್ಯಾಮನ ಕಡೆಗೂ ನೋಡಿ ಮಾತಿಲ್ಲದೆ ಹೊರಟುಹೋದ. ನಾನೆಷ್ಟು ಕೂಗಿದರೂ ಹಿಂದಿರುಗಿ ನೋಡಲೂ ಇಲ್ಲ.

"ಯಾಕೋ ಹಾಗಂದೆ?" ಎಂದು ನಾನು ಶ್ಯಾಮನಮೇಲೆ ತಿರುಗಿಬಿದ್ದೆ.

“ಮತ್ತಿನ್ನೇನೋ? ಯಾವಾಗ ನೋಡಿದರೂ ಅವನ ಗೋಳುಕರೆ ಇದ್ದೇಇದೆ. ನನಗಂತೂ ಅವನ್ನು ಕೇಳಿ ಕೇಳಿ ಬೇಜಾರಾಯಿತು. ಪ್ರಪಂಚದಲ್ಲಿ 'ಉಳಿದವರಿಗಿಲ್ಲದ ದುಃಖ ಇವನಿಗೇನಿದೆ. ಪ್ರೇಮಗೀತ ಬರೆಯಲಿ. ಆದರೆ ಈ ಹಾಳು ಅಳು ಯಾರಿಗೆ ಬೇಕು ?'' ಶ್ಯಾಮನ ದನಿ ಬಿರುಸಾಗಿತ್ತು.

“ಹೌದು, ನೀನು ಕೇಳಿದ ಹಾಗೆ ಬರೆಯಬೇಕು. ನಿನಗೆ ಸುಖ ಇದ್ದರೆ, ಅವನಿಗೂ ಸುಖವಿದೆಯೇ? ಹೇಗೆ ಹೇಳುತ್ತೀ? ಪಾಪ! ಅವನ ಒದ್ದಾಟ ಅವನಿಗೆ''

“ಒದ್ದಾಟವಿದ್ದರೆ ಅವನಲ್ಲೇ ಇಟ್ಟುಕೊಳ್ಳಲಿ. ನನಗೆ ಬೇಡ ಅದು. ನನಗೆ ಅದರಲ್ಲಿ ಆಸಕ್ತಿಯಿಲ್ಲ''

“ಸ್ನೇಹಿತರಿಗೆ ಹೇಳದೆ ಮತ್ತೆ ಯಾರಿಗೆ ಹೇಳಿಕೊಳ್ಳಬೇಕೋ? ನಿನಗೂ ಸಹಾನುಭೂತಿ—''

“ನನಗೆ ಸಹಾನುಭೂತಿಯಿಲ್ಲ. ಅವನ ಸ್ನೇಹವೂ ಬೇಡ. ಸ್ನೇಹಿತರು ಅಂದರೆ ಈ ಗೋಳನ್ನೆಲ್ಲಾ ಕೇಳಬೇಕೇ?''

“ಶುದ್ಧ ಮೃಗ ಕಣೋ ನೀನು. *Brute*— ಪಶು, ಕಲ್ಲಾದರೂ ವಾಸಿ''

“ಹೌದು. ನಾನು ಮೃಗ, ಕಲ್ಲು. ನೀನು ಸಹೃದಯಿ., ನಿನ್ನ ಕವಿಯೊಂದಿಗೆ ನೀನೇ ಇರು''

ಶ್ಯಾಮ್ ಬಿರಬಿರನೆ ಕಾಲುಬೀಸಿಕೊಂಡು ಅಲ್ಲಿಂದ ಹೊರಟುಹೋದ. ಅವನಿಗೂ ನನ್ನ ಮೇಲೆ ಬಹಳ ಕೋಪ ಬಂದಿರಬೇಕು. ಅವನು ಹೊರಟು ಹೋದೊಡನೆಯೇ ನನ್ನ ರಕ್ತವೆಲ್ಲಾ ತಣ್ಣಗಾದಹಾಗಾಯಿತು. ಶ್ಯಾಮ್ ನನ್ನ ಮೇಲೆ ರೇಗಿ ಹೊರಟು ಹೋದನಲ್ಲಾ. ಅವನ ಗೆಳೆತನವಿಲ್ಲ ವಾಗುವುದಲ್ಲಾ ಅಂತ ಕೊರಗಿದೆ. ನಾನು ಆ ರೀತಿಯಲ್ಲಿ ಮಾತಾಡ ಬಾರದಾಗಿತ್ತೆನಿಸಿತು. ಕವಿಗಿಂತಲೂ ನನಗೆ ಶ್ಯಾಮನೇ ಹೆಚ್ಚು ಬೇಕಾದುದು ಅದು ಹೇಗೋ ಏನೋ ಶ್ಯಾಮನಲ್ಲಿ ನನಗೆ ಅಪಾರ ಪ್ರೀತಿಯಿತ್ತು. ಕವಿ ಎಷ್ಟಿದ್ದರೂ ನಮ್ಮಿಬ್ಬರಿಗೂ ಹೊರತಾದವನು. ನಮ್ಮಿಬ್ಬರ ನಡುವೆ ಅವನ ಮಾತಿನಿಂದ ಯಾವ ಅಂತರವೂ ಬರಕೂಡದೆಂದುಕೊಂಡೆ. ನಾನು ಶ್ಯಾಮನನ್ನು ಹಾಗೆಂದುದು ತಪ್ಪೆನಿಸಿತು. ನೇರವಾಗಿ ಅವನ ಮನೆಗೆ

ಹೋದೆ. ಅವನನ್ನು ಸಮಾಧಾನಗೊಳಿಸಲು ಬಹಳ ಕಷ್ಟಪಡಬೇಕಾಯಿತು ಕೊನೆಗೂ ಅವನು ಸಮಾಧಾನಗೊಂಡಮೇಲೆ ನನ್ನ ಮನಸ್ಸು ಸಮಾಧಾನಕ್ಕೆ ಬಂತು. ನಮ್ಮಿಬ್ಬರ ಸ್ನೇಹದ ನಡುವೆ ಯಾವುದೂ ಬರಕೂಡದು. ನಮ್ಮಿಬ್ಬರ ಸ್ನೇಹ ಅವಿಚಲವಾಗಿರಬೇಕೆಂದು ಇಬ್ಬರೂ ತೀರ್ಮಾನಿಸಿದೆವು. ಮುಂದೆ ಬಿ.ಎ. ಪಾಸುಮಾಡಿದ ಕೂಡಲೇ ಇಬ್ಬರೂ ಜತೆಯಲ್ಲಿ ಯಾವುದಾದರೂ ಪತ್ರಿಕೆಯಲ್ಲಿ ಸೇರಿಕೊಳ್ಳುವುದು. ದೇಶಸೇವೆ ಮಾಡಬೇಕು ಎಂದೆಲ್ಲಾ ಕನಸು ಕಟ್ಟಿದೆವು.

ಆದಾದ ಮೂರುನಾಲ್ಕುದಿನ ಕವಿಯನ್ನು ನಾವು ಕಾಣಲಿಲ್ಲ. ಕಾಲೇಜಿನಲ್ಲಿ ಎಲ್ಲೂ ಅವನು ಕಾಣಲಿಲ್ಲ. ಎಲ್ಲಾದರೂ ಶ್ಯಾಮನ ಮಾತಿಗೆ ವಿಪರೀತ ನೊಂದುಕೊಂಡು ಆತ್ಮಹತ್ಯೆ ಮಾಡಿಕೊಂಡಿರುವನೋ ಏನೋ ಎಂದು ನನಗೆ ಗಾಬರಿ. ಆದರೆ ಶ್ಯಾಮನೇನೂ ಆಸಕ್ತಿ ತೋರಿಸಲೇ ಇಲ್ಲ. ನಾನು ಅವನಿಗೆ ಮತ್ತೆ ನೆನಪು ಮಾಡಿದೆ. ಆದಕ್ಕೆ ಅವನು ತಿರಸ್ಕಾರದಿಂದ ಆಡಿದ ಮಾತು ಇನ್ನೂ ಗುಂಯ್ಗುಟ್ಟುತ್ತಿದೆ. ''ಅವನು ಶುದ್ಧ ಹೇಡಿ. ಈ ಕವಿಗಳೆಲ್ಲ ಹೀಗೆಯೇ. ಸಾವಿನ ವಿಷಯ, ಜೀವದ ವಿಷಯ ಬರೆಯಲು ಸರಿ. ಉದ್ದುದ್ದವಾಗಿ ಬರೆಯುತ್ತಾರೆ. ಆದರೆ ಜೀವವನ್ನೆದುರಿಸುವ ಧೈರ್ಯವೂ ಇಲ್ಲ. ಸಾವನ್ನಪ್ಪುವ ಸಾಹಸವೂ ಇಲ್ಲ. ಅಡ್ಡಗೋಡೆಯ ದೀಪಗಳು. ಕೆಲಸಕ್ಕೆ ಬಾರದ, ಕೈಲಾಗದ ಹೇಡಿಗಳು'' ಅಂದ. ನಾನೇನೋ ಅವನ ಮಾತಿನ ಬಿರುಸಿಗೆ ಹೆದರಿ ಸುಮ್ಮನಾದೆ. ಆದರೆ ಮನಸ್ಸು ಮಾತ್ರ ಆತಂಕಪಡುತ್ತಲೇ ಇತ್ತು.

ನಾಲ್ಕನೆಯ ದಿನ ಕವಿ ತಾನಾಗಿಯೇ ಮನೆಗೆ ಬಂದ. ಅವನ ಮುಖದಲ್ಲಿ ಎಂದೂ ಕಾಣದ ಆನಂದ ಕಾಣುತ್ತಿತ್ತು. ನೋವಿನ ತೆರೆ ಸರಿದಂತಾಗಿತ್ತು. ಬಂದವನೇ ತಾನೇ ಮಾತನಾಡಲಾರಂಭಿಸಿದ.

''ನೋಡಿ, ಸೀನು, ನನ್ನ ಹುಡುಗಿಯನ್ನು ನೋಡಿಕೊಂಡು ಬಂದೆ. ಸದ್ಯ !''

''ಓಹೋ ಅದಕ್ಕೇ ಮೂರುದಿನದಿಂದ ಕಾಣಿಸಲಿಲ್ಲ. ಬೆಂಗಳೂರಿನಿಂದ ಈವತ್ತು ಬಂದಿರಾ? ನಮ್ಮಮೇಲೆಲ್ಲ ಕೋಪಿಸಿಕೊಂಡಿರೋ ಎಂದು ನನ್ನ ಅನುಮಾನವಾಗಿತ್ತು''

"ಛೆ! ಕೋಪ ಯಾತಕ್ಕೆ ? ನಾನು ನಿಮ್ಮನ್ನು ಸುಮ್ಮನೆ ಬೇಸರಗೊಳಿಸಿದ್ದೆ. ಆದರೆ ನನಗೆ ಮನಸ್ಸಿಗೆ ಬಹಳ ನೋವಾಯಿತು. ನಾನು ನಿಮ್ಮನ್ನು ಎಷ್ಟು ತೊಂದರೆಗೆ ಈಡುಮಾಡಿದೆನೋ ಅಂತ"

"ಹುಂ! ಬೆಂಗಳೂರಿನಲ್ಲಿ ಏನು ವಿಷಯ. ನಿಮ್ಮ ಸರಸಿ—"

"ಸರಸಿಯನ್ನು ನೋಡಿದ್ದೆ. ಮದುವೆಯಾದರೆ ನನ್ನನ್ನೇ ಮದುವೆಯಾಗುತ್ತೇನೆ. ಇಲ್ಲದಿದ್ದರೆ ಮದುವೆಯಾಗುವುದೇ ಇಲ್ಲ ಅಂತ ಹಟ ಹಿಡಿದಳಂತೆ. ತಂದೆ ಎಷ್ಟು ಹೇಳಿದರೂ ಕೇಳಲಿಲ್ಲ. ಕೊನೆಗೆ ತಂದೆ ಸುಮ್ಮನಾದರು ನಾನೀಸಾರಿ ಹೋದೆನಲ್ಲ. ನನ್ನನ್ನು ಬಹಳ ವಿಶ್ವಾಸದಿಂದ ನೋಡಿಕೊಂಡರು. ನನ್ನ ಈ ಪರೀಕ್ಷೆಯೊಂದು ಮುಗಿದುಬಿಟ್ಟರೆ ಅನಂತರ ಮದುವೆಯಾಗಬಹುದು. ನನಗೆ ದೂರದ ಸಂಬಂಧವಾಗಬೇಕು ಅವರು. ಆದರಿಂದ ಏನೂ ತೊಂದರೆಯಿಲ್ಲ. ಮದುವೆಗೆ ಜಾತಕಗಳನ್ನು ನೋಡಿಸಿದಾರೆ. ಅದೂ ಕೂಡಿದೆ"

"ಹಾಗಿದ್ದರೆ ಇನ್ನೇನು. ರಜೆಯಲ್ಲಿ ನಮಗೊಂದು ಮದುವೆಯೂಟ. ಭರ್ಜರಿಯಾದುದು. ಅದೂ ನಿಮ್ಮಲ್ಲಿ ಬಿಡಿ."

"ನಾನು ಸರಸಿಯನ್ನು ಮಾತಾಡಿಸಿದೆ. ಅವಳಿಗಂತೂ ಬಹಳ ಸಂತೋಷವಾಯಿತು ನಾನಲ್ಲಿಗೆ ಹೋದುದು. ನನಗೆ ನನ್ನ ಸಣ್ಣತನ ನೆನಪಾಯಿತು. ಇಂತಹ ಸುಂದರ ಹುಡುಗಿಗೆ ನಾನು ತಕ್ಕವನಲ್ಲ ಎನಿಸಿತು. ಅವಳಿಗೆ ಆದನ್ನು ಹೇಳಿಯೂ ಹೇಳಿದೆ. ಅವಳು ಈ ಮಾತು ಕೇಳಿ ಮೊದಲು ನಕ್ಕುಬಿಟ್ಟಳು. ಅನಂತರ ಕಣ್ಣಿನಲ್ಲಿ ನೀರು ಹಾಕಿಕೊಂಡಳು. ಹೆಣ್ಣು ಮಕ್ಕಳಿಗೆ ನಕ್ಕರೂ ಚೆನ್ನ, ಅತ್ತರೂ ಚೆನ್ನ. ನಕ್ಕರೆ ಬೆಳದಿಂಗಳು ಚೆಲ್ಲಿದಹಾಗಿತ್ತು ಮುಖ. ಅತ್ತಾಗ ಗುಲಾಬಿಯ ಹೂವಿನಮೇಲೆ ಎರಡು ಹನಿ ನಿಂತಂತೆ ಸುಂದರವಾಗಿತ್ತು. ಹಾಗೆಲ್ಲಾ ನಾನು ಅನ್ನಕೂಡದು ಎಂದು ನನಗೆ ಹೇಳಿದಳು. ನನಗೇನೂ ಕಡಿಮೆಯಿಲ್ಲವೆಂದಳು. ಅನಂತರ ನನ್ನ ಬರಹದ ವಿಷಯ ಬಂತು. ನಾನು ಆ ದಿನ ಸಭೆಯಲ್ಲಿ ಹಾಡಿದೆನಲ್ಲ ಆ ಹಾಡು ಹೇಳಿದೆ. ಈ ವರ್ಷ ಬಿ. ಎಂ. ಶ್ರೀಯವರ ರಜತೋತ್ಸವದ ಪದಕಕ್ಕೆ ಕವಿತೆ ಬರೆಯುವ ಯೋಚನೆ ಮಾಡಿದ್ದೇನೆ. ಪದಕ ಬಂದರೆ ಮದುವೆಯಲ್ಲಿ ಸರಸಿಯ ಕೊರಳಿಗೆ ಆದನ್ನು ಹಾಕಬಹುದು."

''ಹೌದು ಇನ್ನೂ ಈಗ ಡಿಸೆಂಬರ್ ತಿಂಗಳು. ಜನವರಿ ೧೦ನೇ ತಾರೀಖಿನವರೆಗೂ ಕಾಲವಿದೆ.''

''ನಿಮ್ಮ ವಿಷಯವನ್ನು ಅವಳಿಗೆ ಹೇಳಿದೆ. ನನ್ನ ಜೀವದ ಸ್ನೇಹಿತರು ಇಬ್ಬರಿದ್ದಾರೆ. ಅವರಲ್ಲಿ ಒಬ್ಬ ಬಹಳ ಚೆನ್ನಾಗಿ ನುರಿತ ನಟ. ಇನ್ನೊಬ್ಬ ಆಟಗಾರ ಅಂತ ತಿಳಿಸಿದೆ. ನಿಮ್ಮನ್ನು ನೋಡಬೇಕೆಂದು ಆಸೆಪಟ್ಟಳು. ಹಾಗೆಯೇ ನಿಮ್ಮ *Cousins* ವಿಷಯಾನೂ ಹೇಳಿದೆ. ಅವರೆಲ್ಲರಿಗೂ ಸರಸಿ ನಮಸ್ಕಾರ ತಿಳಿಸಹೇಳಿದಾಳೆ.''

ಕವಿಯ ಮಾತಿನಿಂದ ನನಗೆ ಸಂತೋಷವಾದರೂ, ಒಂದು ನಿಮಿಷ ಅಸೂಯೆಯಿಂದ ಹೃದಯ ತಲ್ಲಣಿಸಿತು. ಎಷ್ಟು ಸುಖವಾಗಿ ತನ್ನ ಪ್ರಿಯೆಗೆ ಹೇಳಿದ ಕವಿ. ಅವಳನ್ನು ಮೆಚ್ಚಿಸಿ, ಒಲಿಸಿದ. ಲಲಿತಾ ನನ್ನನ್ನು ಹಾಗೆ ಒಲಿಯುವಳೇ ? ಎಂದು ನನಗನ್ನಿಸಿತು. ಕವಿಯ ಕೈಯಲ್ಲಾದರೂ ಒಂದು ಕವಿತೆ ಬರೆಸಿ ಅದನ್ನು ಲಲಿತೆಗೆ ಕೊಟ್ಟು ನೋಡಲೇ ಎಂದು ಕೂಡ ಅನ್ನಿಸಿತು. ಆದರೆ ಈ ಅಸೂಯೆ ಒಂದು ಕ್ಷಣಕಾಲ ಮಾತ್ರ.

''ರಾತ್ರಿಗೆ ಸಿಗುವಿರಾ ಸೀನು ? ಶ್ಯಾಮ್ ಬರುವರೇನು ? ಅವರನ್ನು ನೋಡಬೇಕು''

ಕವಿ ಹಾಗಂದು ಹೇಳಿ ಅವಸರ ಅವಸರವಾಗಿ ಹೊರಟುಹೋದ.

ರಾತ್ರಿ ಅವನು ಬಂದಾಗ ಶ್ಯಾಮ್ ಮುಖ ಸಿಂಡರಿಸಿಕೊಂಡು ಮೂಲೆಯಲ್ಲಿದ್ದ ಕುರ್ಚಿಯಮೇಲೆ ಕುಳಿತಿದ್ದ. ಕವಿಯನ್ನು ಕಂಡರೆ ಅವನಿಗೆ ಯಾಕೆ ಹೀಗೆ ಸಿಡುಕೋ ನನಗೆ ತಿಳಿಯಲಿಲ್ಲ. ಕವಿ ಬಂದಿದಾನೆಂದು ಹೇಳಿದಾಗ ಅನಾದರ ತೋರಿಸಿದ್ದ. ರಾತ್ರಿಗೆ ಬರುತ್ತಾನಂತೆ ಎಂದಾಗ 'ಬಂದರೆ ಬರಲಿ' ಎಂದುತ್ತರಕೊಟ್ಟ. ಅವನಿಗಾಗಿ ನಾನು ಕಾಯುವುದಿಲ್ಲ ನಾನು ಹೋಗುತ್ತೇನೆಂದು ಐದಾರು ಬಾರಿ ಎದ್ದ. ಆದರೆ ನಾನೇ ಬಲವಂತ ಮಾಡಿದಮೇಲೆ ಕುಳಿತುಕೊಂಡ. ಆದರೆ ಚಡಪಡಿಸುತ್ತಿದ್ದ. ಐದು ನಿಮಿಷಕ್ಕೊಂದಾವರ್ತಿ ಹೊರಡಲು ಏಳುತ್ತಿದ್ದ. ಏನಾದರೂ ನೆವ ಹೇಳಿ ತಪ್ಪಿಸಿಕೊಳ್ಳಲು ಯತ್ನಿಸಿದಂತಿತ್ತು. ಆದರೆ ನನಗೆ ಅದು ಸರಿದೋರಲಿಲ್ಲ. ಹಾಗೂ ಹೀಗೂ ಕವಿ ಬರುವತನಕ ಕೂರಿಸಿಕೊಂಡಿದ್ದೆ. ಕವಿ ಬಂದವನೇ ಮೊದಲು ಶ್ಯಾಮನನ್ನೇ ಮಾತನಾಡಿಸಿದ. ಆವತ್ತು ಎಂದೂ ಇಲ್ಲದುದು

ನಗಲುಕೂಡ ಪ್ರಯತ್ನಿಸಿದ. ಆದರೆ ಶ್ಯಾಮನ ಮುಖದ ಬಿಗಿ ಸಡಿಲವಾಗಲಿಲ್ಲ. ಕವಿ ಅದನ್ನು ಗಮನಿಸದವನಂತೆ ಒಂದೇಸಮನಾಗಿ ಮಾತನಾಡುತ್ತಿದ್ದ. ಸರಸಿಯ ಸೌಂದರ್ಯ, ಅವಳ ಬುದ್ಧಿವಂತಿಕೆ, ಅವಳು ತಿಳಿದುಕೊಂಡಿರುವ ವಿಷಯಗಳು, ಅವಳು ಅವನೊಂದಿಗೆ ಆಡಿದ ಮಾತು ಇವುಗಳನ್ನೆಲ್ಲಾ ಹೇಳಿದ. ಸರಸಿಯ ಹತ್ತಿರ ತಾನು ಶ್ಯಾಮನನ್ನೂ ನನ್ನನ್ನೂ ಹೊಗಳಿದುದನ್ನೂ ಹೇಳಿದ. ಆದರೂ ಶ್ಯಾಮ್ ಮಾತ್ರ ಸೆಟೆದುಕೊಂಡೇ ಕುಳಿತಿದ್ದ.

''ಅಂದಹಾಗೇ—ನಾನೊಂದು ಕಾದಂಬರಿ ಬರೆದಿದ್ದೇನೆ. ಅದನ್ನು ಓದಿನೋಡುವಿರಾ ?'' ಎಂದು ಶ್ಯಾಮನನ್ನು ಕೇಳಿದ.

''ನನಗೆ ಪುರುಸೊತ್ತೇ ಇಲ್ಲ'' ಎಂದ ಶ್ಯಾಮ್ ಗಡುಸಾಗಿ.

''ಹೋಗಲಿ ಬಿಡಿ, ನೀವು ಓದುವಿರಾ ಸೀನು''

''ಹುಂ. ಆದರೆ ನನಗೂ ಕೊಂಚ ದಿನ ಬೇಕು''

''ಹತ್ತುದಿನದಲ್ಲಿ ಓದಲಾಗುತ್ತೆ ತಾನೇ. ಕಾದಂಬರಿ ಸಣ್ಣದು. ಸುಮಾರು ನೂರುನೂರೈವತ್ತು ಪುಟ. ಅದನ್ನು ಬೆಂಗಳೂರಿನಲ್ಲಿ ಪ್ರಕಾಶಕರಿಗೆ ಕಳಿಸುವ ಮೊದಲು ನೀವು ನೋಡಿದರೆ ಚೆನ್ನ ಅಂತ.''

''ಓಹೋ, ಅದಕ್ಕೇನು !''

''ಅದರ ಹೆಸರು— 'ಮೂರುಮೊಗ್ಗು' ಅಂತ''

ಕವಿಯ ಮಾತಿನಲ್ಲಿ ಕೊಂಚವಾದರೂ ಆಸಕ್ತಿಯಿಲ್ಲದೆ ಕುಳಿತಿದ್ದ ಶ್ಯಾಮ್ ಆಕಳಿಸುತ್ತಾ ಎದ್ದ.

''ನಾನು ಹೊರಡುತ್ತೇನೋ ಸೀನು. ನಾಳೆ ಬೆಳಿಗ್ಗೆ ಕಾಲೇಜಿಗೆ ಹೋಗುವಾಗ ಸಿಗುತ್ತೀಯಾ ತಾನೇ ?''

''ಹುಂ''

ಶ್ಯಾಮ್ ಹೊರಡಲು ಸಿದ್ಧನಾದ. ಕವಿ ತಾನೂ ಹೊರಡುವುದಾಗಿ ಹೊರಟ. ಶ್ಯಾಮನಿಗೆ ಅವನ ಜತೆಯಲ್ಲಿ ಹೊರಡಲು ಇಷ್ಟವಿರಲಿಲ್ಲವೋ ಏನೋ ಅಂತೂ ಮುಖ ಗಂಟುಗಂಟಾಯಿತು. ಇಬ್ಬರೂ ಹೊರಕ್ಕೆ ಹೋದರು. ನಾನು ಕೋಣೆಯ ಬಾಗಿಲು ಹಾಕಿಕೊಂಡು ದೀಪದ ಹತ್ತಿರ ಓದಲು ಕುಳಿತೆ. ಎರಡು ಮೂರು ನಿಮಿಷದಲ್ಲೇ ಹೊರಗಿನಿಂದ ಶ್ಯಾಮ್ ಬಂದ.

"ಯಾಕೋ ಬಂದುಬಿಟ್ಟೆ" ಎಂದೆ ನಾನು.

"ನನಗೆ ಬೇರೆ ಏನೋ ಕೆಲಸವಿದೆ ಅಂತ ಹೇಳಿ ಆ ಜಿಗಣೆಯನ್ನು ಆಕಡೆಗೆ ಸಾಗಹಾಕಿ ಬಂದೆ."

"ಅಲ್ಲವೋ, ಕವಿಯನ್ನು ಕಂಡರೆ ನಿನಗೆ ಯಾಕೋ ಇಷ್ಟು ದ್ವೇಷ?"

ಶ್ಯಾಮ್ ಏನೂ ಉತ್ತರ ಕೊಡಲಿಲ್ಲ. ನನಗಂತೂ ಅರ್ಥವೇ ಆಗಲಿಲ್ಲ. ತಿರುಗಿ ಅದೇ ಪ್ರಶ್ನೆ ಹಾಕಿದೆ.

"ಪಾಪ. ಏನೋ ನಾವು ಸ್ನೇಹಿತರು ಅಂತ ನಮ್ಮ ಹತ್ತಿರ ಹೇಳಿಕೊಳ್ಳುತ್ತಾನೆ. ಹೇಳಲಿ, ಬಿಡು."

"ಹೌದು. ಅವನ ಸ್ನೇಹ ಇಷ್ಟೇ!" ಎಂದ ಅವನು ಬಿರುಮುಖದಿಂದ.

"ಯಾಕೆ? ಏನಾಯಿತೋ?"

"ನನಗೆ ಯಾಕಪ್ಪಾ. ನೀವಿಬ್ಬರೂ ಸ್ನೇಹಿತರು. ನಿಮ್ಮಿಬ್ಬರ ಮಧ್ಯೆ ನಾನು ಯಾಕೆ ಬರಲಿ? ಇದಕ್ಕಿಂತ ನಾನೇ ದೂರವಾದರೆ ಚೆನ್ನ" ಎಂದು ಶ್ಯಾಮ್ ಕಣ್ಣು ಮುಚ್ಚಿದ.

ಅವನ ಮಾತಿನಿಂದ ನನ್ನ ಕುತೂಹಲ ಕೆರಳಿತು. ಏನೋ ಮಾತು ನಡೆದಿರಬೇಕು. ನನ್ನನ್ನು ಕವಿ ಏನೋ ಅಂದಿರಬೇಕು ಅಂತ ತೋರಿತು. ಅವನ್ನು ತಿಳಿದುಕೊಳ್ಳಲೇಬೇಕೆಂದು ಮನಸ್ಸಿನಲ್ಲಿ ಆತಂಕ.

"ಏನಂದನೋ, ಹೇಳೋ ನನ್ನಲ್ಲಿ ಕೂಡ ಮರೆಮಾಚಬೇಕೇನೋ. ನಾನು ನಿನಗೆ ಹೇಳದ ಗುಟ್ಟಿದೆಯೋ?" ಎಂದೆಲ್ಲ ಅವನನ್ನು ಬೇಡಿಕೊಂಡು ಬಲವಂತಪಡಿಸಿದ ಮೇಲೆ ಹೇಳಿದ

"ನಾನು ಇದನ್ನು ನಿನಗೆ ಹೇಳಿದುದು ಅವನಿಗೆ ತಿಳಿಯಕೂಡದು. ನಿನ್ನ ಮೇಲೆ ಅವನಿಗೆ ನಂಬಿಕೆಯಿಲ್ಲ. ನಿನಗೂ ನಿನ್ನ *Cousin* ಯಮುನಾಗೂ ಈ ಅಪವಾದ ಬಂತಲ್ಲಾ. ಅದು ಸಂಪೂರ್ಣವಾಗಿ ನಿಜ ಅಂತ ಹೇಳಿದ"

"ಮತ್ತೆ ಅದು ಸುಳ್ಳು ಅಂತ ವಾದಮಾಡಿದ ಅಂತ ನೀನೇ ಹೇಳಿದೆ"

"ಹೌದು. ನನ್ನ ಪರಿಚಯ ಮಾಡಿಕೊಂಡಮೇಲೆ ಅವನಿಗೆ ಆ ಅಪವಾದ ಸತ್ಯ ಅಂತ ಗೊತ್ತಾಯಿತಂತೆ. ನಿನಗೂ ಯಮುನಾಗೂ ಏನೋ ಒಳಗೇ ಸಂಬಂಧವಿದೆಯೆಂದು ಅವನು ಹೇಳಿದ. ಅಷ್ಟೇ ಅಲ್ಲ. ನಿನ್ನ ಇನ್ನೊಬ್ಬ *Cousin* ಇಲ್ಲವೇ ಲಲಿತಾ, ಆಕೆಯ ಮೇಲೆ ಅವನಿಗೆ ಕಣ್ಣು"

"ಹೋಗೋ ಹೋಗೋ, ಸರಸಿಯ ಬಗ್ಗೆ ಈಗತಾನೇ ಹೇಳಿದ. ಅವನ್ನು ಕೇಳಿಯೂ ಲಲಿತೆಯ ಮೇಲೆ ಕಣ್ಣು ಅಂದರೆ ನಗುತ್ತಾರೆ"

"ನೋಡಪ್ಪ. ನಾನು ಅವನವಿಷಯ ಮಾತನಾಡಲೇ ಬಾರದಾಗಿತ್ತು. ಆದರೆ ನೀನು ಕೇಳಿದುದರಿಂದ ಹೇಳಿದೆ ಅಷ್ಟೇ. ಅವನ ಈ ಕಾಲೇಜಿನ ಪ್ರಣಯಭಂಗವ ಪ್ರಸಂಗವಿವೆಯಲ್ಲ, ಅದು ಖಂಡಿತ ನಿಜ. ಅವನು ಎಷ್ಟೇ ಹೇಳಿದರೂ ನನಗೆ ನಂಬಿಕೆಯಿಲ್ಲ. ಚಂಪಕಳಿಗೆ ತನ್ನ ಪ್ರೇಮಗೀತ ಕೊಡಲು ಹೋಗಿ ಬೈಸಿಕೊಂಡು ಬಂದಿದಾನೆ. ಅವರಿಂದಲೇ ಆತರಹ. ಅವನಿಗೇನು ಕವಿ. ಎಲ್ಲಂದರೆ ಅಲ್ಲಿ ಕಣ್ಣು. ನನ್ನನ್ನು ಕೇಳುತ್ತಿದ್ದ. ಲಲಿತಾ ಚೆನ್ನಾಗಿದಾಳೆ ಅಲ್ಲವೇ ಅಂತ. ಸರಸಿಯೂ ಹಾಗೆಯೇ ಇರುವಳಂತೆ!"

ನಾನು ಯೋಚನೆಯಲ್ಲಿ ಮುಳುಗಿದೆ. ಲಲಿತಾ! ಕವಿ! ಲಲಿತೆ ಕವಿಯನ್ನು ಬಾಯಿತುಂಬಾ ಹೊಗಳಲು ಬೇರೆ ಪ್ರಾರಂಭಿಸಿದ್ದಳು. ಐದಾರುದಿನಗಳಿಂದಲಂತೂ ಮಾತುಮಾತಿಗೂ ಲಲಿತಾ ಕವಿಯನ್ನು ಹೊಗಳಿದ್ದೇಹೊಗಳಿದ್ದು. ಅವನಬಗ್ಗೆ ಮೆಚ್ಚುಗೆಯನ್ನು ತೋರಿಸಿದುದಂತೂ ಅತಿಯಾಗಿಯೇ ಇತ್ತು. ಕವಿ ಕೂಡ ಆಗಾಗ ಮಾತಾಡುತ್ತ ಲಲಿತೆಯ ವಿಷಯವನ್ನೂ, ಯಮುನೆಯ ವಿಷಯವನ್ನೂ ವಿಚಾರಿಸುತ್ತಿದ್ದ. ಅವರು ಅವನ ಪದ್ಯ ಹೊಗಳಿದರೆಂದರೆ ಹಿಗ್ಗಿದ್ದ. ಒಂದು ದಿನವಂತೂ ಲಲಿತಾ ತನ್ನನ್ನು ಕವಿಗೆ ಪರಿಚಯ ಮಾಡಿಕೊಡಬೇಕೆಂದು ಕೂಡಾ ಕೇಳಿದ್ದಳು. ಅವನು ಸರಿಯಾಗಿ ಚೆನ್ನಾಗಿ ಉಡುಪು ಹಾಕಿಕೊಳ್ಳಲೆಂದೂ ಅಂದಿದ್ದಳು. ಅದು ಬರಿಯ ನಗೆಮಾತೆಂದು ನಾನದನ್ನು ಕವಿಗೆ ಮರುದಿನ ಹೇಳಿದ್ದೆ. ಆ ಮಾತು ಕೇಳಿದ ಎರಡು ದಿನ ಕವಿ ಮುಖಕ್ಷೌರ ಮಾಡಿಕೊಂಡು, ತಲೆ ಬಾಚಿಕೊಂಡು ಚೆನ್ನಾಗಿ ಬಟ್ಟೆ ಹಾಕಿಕೊಳ್ಳುತ್ತಿದ್ದ. ಅದೆಲ್ಲಾ ಆಗ ನನ್ನ ಗಮನಕ್ಕೆ ಬಂದಿರಲಿಲ್ಲ. ಈಗ ಶ್ಯಾಮನ ಮಾತು ಕೇಳಿದಮೇಲೆ ಈ ಸಣ್ಣ ಸಣ್ಣ ವಿಷಯಗಳಿಗೆಲ್ಲಾ ಬೇರೆ ಅರ್ಥಕೊಟ್ಟು ಅನುಮಾನ ಪಡಲಾರಂಭಿಸಿದೆ. ಒಂದೊಂದು ನಡೆಯಲ್ಲೂ ಒಂದೊಂದು ನುಡಿಯಲ್ಲೂ ಕವಿ ಲಲಿತೆಯನ್ನು ಮೆಚ್ಚಿಸಲು ಪ್ರಯತ್ನಿಸಿರುವನೆಂದು ನನಗೆ ಅನಿಸಿತು.

ಮರುದಿನ ಬೆಳಿಗ್ಗೆ ಕವಿ ತನ್ನ ಕಾದಂಬರಿಯ ಹಸ್ತಪ್ರತಿಯನ್ನು ತಂದುಕೊಟ್ಟ. ಅದನ್ನು ತನ್ನ "ಜೀವದ ಗೆಳೆಯರಾದ ಶ್ರೀನಿವಾಸ

ಮತ್ತು ಶ್ಯಾಮ್‌ಸುಂದರ್ ಇವರಿಗೆ ಪ್ರೀತಿ ಪುರಸ್ಸರ" ಅರ್ಪಿಸಿದ್ದ. ಅವನ ಈ ಅರ್ಪಣದಿಂದ ನನಗೆ ಕೊಂಚ ಸಂತೋಷವೇನೋ ಆಯಿತು. ಆದರೆ ಹಿಂದಿನ ರಾತ್ರಿ ಶ್ಯಾಮ್ ಹೇಳಿದ್ದುದು ಇನ್ನೂ ಮನಸ್ಸಿನಲ್ಲೇ ಕೊರೆಯುತ್ತಿತ್ತು ಕವಿಯ ಮೇಲೆ ನನ್ನ ಅನುಮಾನ ಬಲವಾಗಿತ್ತು.

"ನೋಡಿ ಸೀನು, ಇದನ್ನು ಬೇಗನೆ ಓದಿಕೊಡಬೇಕು. ನಿಮ್ಮ ಅಭಿಪ್ರಾಯವನ್ನು ತಿಳಿಸಬೇಕು. ಇದು ನನ್ನ ಮೊದಲನೆಯ ಕಾದಂಬರಿ. ನಾನಂತೂ ಸಾಹಿತ್ಯವನ್ನು ಅಭ್ಯಾಸ ಮಾಡಿಲ್ಲ"

"ನೀವು ಕವಿತೆಗಳನ್ನು ಬರೆಯುವಿರಿ. ನಿಮ್ಮಂತಹವರಿಗೆ ಅದು ತಾನಾಗಿಯೇ ಬರುತ್ತದೆ. ನೀವೇನೂ ಅಭ್ಯಾಸಮಾಡಬೇಕಾಗಿಯೇ ಇಲ್ಲ" ಎಂದೆ ನಾನು ಅರೆಮನಸ್ಸಿನಿಂದ.

ಕವಿ ಕೊಂಚ ಹೊತ್ತು ಹಾಗೆಯೇ ಕುಳಿತಿದ್ದವನು ಮೆಲ್ಲನೆದ್ದು ಕಿಟಕಿಯ ಬಳಿಗೆ ಹೋಗಿ ನಿಂತ. ನನಗೆ ಬಳೆಗಳ ಸದ್ದು ಕೇಳಿಸಿ ನಾನೂ ಅವನ ಪಕ್ಕದಲ್ಲಿ ಹೋಗಿ ನಿಂತೆ. ಹೊರಗಡೆ ಲಲಿತಾ ತನ್ನ ಸ್ನೇಹಿತೆಯ ಮನೆಗೆ ಪುಸ್ತಕ ತೆಗೆದುಕೊಂಡು ಹೋಗುತ್ತಿದ್ದಳು. ಲಲಿತಾ ಅದೇ ಬೆಳಿಗ್ಗೆ ನೀರು ಹಾಕಿಕೊಂಡಿದ್ದಳು. ಮಂಡಿ ಮುಟ್ಟುವಷ್ಟು ಉದ್ದ ಕೂದಲು. ಅದು ಮಿನುಗುತ್ತಿತ್ತು. ಸೂರ್ಯನ ಹೊಂಬಿಸಿಲಲ್ಲಿ. ಸಡಿಲವಾಗಿ ಬಿಟ್ಟಿದ್ದರಿಂದ ಹರಡಿಕೊಂಡಿತ್ತು. ಆದಿನ ರೈಲು ನಿಲ್ದಾಣದಲ್ಲಿ ನಾನು ಅವಳ ಸೌಂದರ್ಯವನ್ನು ಮೊದಲಬಾರಿ ಅರಿತೆನಲ್ಲ, ಅದೇ ತೆಳುಸೀರೆ, ಅದೇ ರವಿಕೆ ತೊಟ್ಟಿದ್ದಳು. ನನಗೆ ಕವಿಯ ಮೇಲೆ ಇದ್ದಕ್ಕಿದ್ದಂತೆ ಅಸೂಯೆ ಮಿತಿಮೀರಿತು. ಅವನೇಕೆ ಲಲಿತೆಯ ಕಡೆಗೆ ನೋಡಬೇಕೆಂದು ನನ್ನ ಅನುಮಾನ ಬಲವಾಯಿತು. ಜತೆಗೆ ಹಿಂದಿನ ರಾತ್ರಿ ಶ್ಯಾಮನಾಡಿದ್ದ ಮಾತು!

ಕವಿ ಹೊರಟುಹೋದಮೇಲೆ ಕೂಡ ನನಗೆ ಕೋಪ ತಗ್ಗಲಿಲ್ಲ. ಅವನ ಕಾದಂಬರಿಯ ಹಸ್ತಪ್ರತಿಯನ್ನು ಚೂರುಚೂರು ಮಾಡಿಬಿಡಲೇ ಎನಿಸಿತು. ಆದರೆ ಅಂತಹ ಅಚಾತುರ್ಯ ನಡೆಸಲಿಲ್ಲ. ಕಾಲೇಜಿಗೆ ಹೊತ್ತಾಗಿ ಹೋಯಿತೆಂದು ಊಟಕ್ಕೆ ಹೊರಟೆ. ನಾನು ಬುಸಬುಸನೆ

ಊಟಮಾಡಿದುದನ್ನು ಕಂಡು ನಮ್ಮ ಮನೆಯವರು ಏನೆಂದುಕೊಂಡರೋ ಏನೋ!

ಆದಿನ ಸಂಜೆ ಕಾಲೇಜಿನಿಂದ ಮನೆಗೆ ಬಂದಾಗ ಲಲಿತೆಯನ್ನು ಅವರ ಮನೆಯ ಬಾಗಿಲಲ್ಲಿ ಕಂಡೆ. ಅವಳು ನಸುನಕ್ಕೊಡನೆ ನನ್ನ ಮನಸ್ಸಿನ ಆಯಾಸವೆಲ್ಲಾ ತೀರಿದಂತಾಯಿತು, ಹೊಸ ಉತ್ಸಾಹ ಮೂಡಿಬಂದಂತಾಯಿತು. ಅವಳ ನಗೆ ಅಮೃತವರ್ಷದಂತಿತ್ತು 'ಎಂದರೆ ಅರ್ಥವಾಗುವುದೋ ಇಲ್ಲವೋ. ಬಹಳ ಸುಸ್ತಾಗಿರುವಾಗ ತಂಪಾದ ಎಳನೀರು ಕುಡಿದರೆ ಆಗುವಷ್ಟು ತಂಪು ನನ್ನ ಕಣ್ಣಿಗೆ, ಮನಸ್ಸಿಗೆ ಆಯಿತು. ಅವಳೊಂದಿಗೆ ಮಾತಾಡುತ್ತಾ ನಿಂತೆ.

'' ನೀನು· ಕವಿ ನಿನ್ನ ರೂಮಿನಲ್ಲಿದ್ದರಲ್ಲೋ ಬೆಳಿಗ್ಗೆ. ನಾನು ಲಕ್ಷ್ಮಿಯ ಮನೆಗೆ ಹೋಗುತ್ತಾ ನೋಡಿದೆ.'' ಎಂದಳು ಲಲಿತಾ.

ಕವಿಯದೇ ಯಾಕೆ ಮಾತೆತ್ತಬೇಕು ಲಲಿತಾ! ಬೇರೆ ಯಾವ ವಿಷಯವೂ ಇಲ್ಲವೇ ಎಂದು ನನ್ನ ಹೃದಯ ಹುಚ್ಚಾಯಿತು. ಹಿಂದೆ ಇವಳು ಶ್ಯಾಮನ ನಾಟಕದ ವಿಷಯ ಮಾತಾಡುವಾಗಲೂ ಹೀಗೆಯೇ ನನ್ನ ಮನಸ್ಸನ್ನು ಚೇಳು ಕುಟುಕಿದಂತಾಗುತ್ತಿತ್ತು. ಈಚೆಗೆ ಶ್ಯಾಮನ ವಿಚಾರವಾಗಿ ಹೆಚ್ಚು ಮಾತನಾಡುತ್ತಲೇ ಇರಲಿಲ್ಲ. ಮಾತೆತ್ತಿದರೆ ಕವಿಯ ಬಗ್ಗೆ! ಇದು ಯುವತಿಯರಿಗೆ ಸಾಮಾನ್ಯ. ತಾವು ಕಂಡ ಕಲಾವಿದರನ್ನು ಮೆಚ್ಚುತ್ತಾರೆ. ಕಲೆಯ ವಲಯದ ಮೋಹಕ್ಕೆ ಮಾರು ಹೋಗುತ್ತಾರೆ. ಕೆಲವು ದಿವಸ ಆ ಕಲಾವಿದರು ಈ ಹೆಣ್ಣುಗಳ ಮನಸ್ಸನ್ನು ಸೂರೆಗೊಂಡಿರುತ್ತಾರೆ. ಈ ಮೋಹದ ಕಾವಿನಲ್ಲಿ ಮೆಚ್ಚುಗೆಯಿಂದ ಮದುವೆಯ ಕಲ್ಪನೆಯವರೆಗೂ ಹೆಣ್ಣಿನ ಯೋಚನೆ ಹರಿಯುತ್ತದೆ. ಆದರೆ ಇದು ಕೆಲವುದಿನಮಾತ್ರ. ಈ ಕಾವು ಕೊಂಚ ದಿನಗಳಲ್ಲೇ ಆರಿಹೋಗುತ್ತದೆ. ಅನಂತರ ಮತ್ತಾವ ಕಲೆಗಾರನಲ್ಲೋ ಆಸಕ್ತಿ ಮೂಡುತ್ತದೆ. ಅಂತೆಯೇ ಲಲಿತೆಗೆ ಶ್ಯಾಮನಲ್ಲಿ ಕೊಂಚಕಾಲ ಹಿರಿಮೆ ಕಾಣಿಸಿತು. ಈಗ ಕವಿಯಲ್ಲಿ. ಆಗ ನನಗಿದೊಂದೂ ತಿಳಿಯದು. ನನಗೆ ಗೊತ್ತಿದ್ದುದಿಷ್ಟು. ಕವಿಯ ವಿಷಯವಾಗಿ ಅವಳು ರಂಗಾಗಿ ಮಾತನಾಡುತ್ತಿದ್ದಳು. ಆದರಿಂದ ನನ್ನ ಹೃದಯ ಹಾವಿನ ಹುತ್ತವಾಗುತ್ತಿತ್ತು.

"ಹುಂ! ಬಂದಿದ್ದ" ಎಂದೆ ಆಸಕ್ತಿಯಿಲ್ಲದವನಂತೆ.

"ಏನಾದರೂ ಹೊಸಗೀತ ಬರೆದಿರುವರೇನು?"

"ಏನೂ ಇಲ್ಲ. ಗೀತವನ್ನೇನೂ ಬರೆದಿಲ್ಲ" ನಾನು ನೋವಿನ ಕಾವಿನಿಂದಲೇ ಉತ್ತರ ಕೊಟ್ಟೆ.

"ಹಾಗಾದರೆ—"

"ಲಲಿತಾ, ನಿನಗೆ ಮಾತಾಡಲು ಬೇರೆ ವಿಷಯವೇ ಇಲ್ಲವೇನು? ಸುಮ್ಮನೆ ಕವಿಯ ವಿಷಯವೇ ಮಾತನಾಡುತ್ತೀಯಲ್ಲಾ" ಎಂದು ನನಗರಿವಿಲ್ಲದೆಯೇ ನಾನು ರೇಗಿನಿಂದ ಆಡಿದೆ.

ಲಲಿತೆಯ ಮುಖ ಇದ್ದಕ್ಕಿದ್ದಂತೆ ಕೆಂಪೇರಿತು. ಕೋಪ ಬಂದಂತೆ ಕಣ್ಣು ಕಿಡಿಯಿತು. ತುಟಿ ನಡುಗುತ್ತಿತ್ತು. ಒಂದು ನಿಮಿಷದಲ್ಲೇ ಅವಳ ಈ ಕೋಪ ಕಣ್ಣೀರಾಯ್ತು. ಆ ಕಣ್ಣೀರನ್ನು ನೋಡಿ ನನ್ನ ಕೋಪವೂ ಕರಗಿತು.

"ನಾನು ಸುಮ್ಮನೆ ಹಾಗಂದೆ ಕಣೇ. ಅದಕ್ಕೆ ಅಳುವರೇನೇ ಹುಚ್ಚಿ." ಎಂದು ಸಮಾಧಾನಪಡಿಸಲು ಯತ್ನಿಸಿದೆ. ಅವಳಿಗೆ ನಾನು ಸಮಾಧಾನ ಹೇಳಿದಷ್ಟೂ ಅಳು ಹೆಚ್ಚಿಸಿದಳು. ಅವಳಿಗೆ ಗೊತ್ತಾಗಿಹೋಗಿರಬೇಕು ನನ್ನ ಮಾತಿನ ಸೂಕ್ಷ್ಮ.

"ನಿನ್ನ ಸ್ನೇಹಿತನಲ್ಲಾ ಎಂದು ನಾನು ಮಾತಾಡಿದೆ. ಇನ್ನುಮೇಲೆ ಅವರ ವಿಷಯ ಎತ್ತದಿದ್ದರೆ ಸರಿತಾನೇ" ಎಂದಳು ಬಿಕ್ಕಿ ಅಳುತ್ತಾ.

"ನೋಡು, ಮತ್ತೆ. ನನ್ನ ಮಾತನ್ನು ತಪ್ಪರ್ಥಮಾಡಿಕೊಂಡೆಯಲ್ಲಾ ಏನೋ ಕೋಪದಲ್ಲಿ ಹಾಗಂದರೆ—"

"ಕೋಪ! ಅಂತಹ ಮಾತನ್ನಬಹುದೋ? ನನಗೇನು ನಿನ್ನ ಕವಿ. ನಿನ್ನ ಶ್ಯಾಮ್, ಎಲ್ಲಾ ನಿನ್ನ ಸ್ನೇಹಿತರು. ಅವರನ್ನು ಸುಮ್ಮನೆ ನೀನೇ ತಾನೇ ಹೊಗಳುತ್ತಿದ್ದುದು. ಏನೋ ಕೇಳಿದ್ದಕ್ಕೇ ಹೀಗೆ ಕೋಪಿಸಿದರೆ—"

ಕಣ್ಣೀರು ನಿಂತಿತ್ತು. ಆದರೆ ಅವಳ ಧ್ವನಿಯಲ್ಲಿನ್ನೂ ಮುನಿಸು ಹಾಗೆಯೇ ಇತ್ತು.

"ತಪ್ಪಾಯ್ತು ಕಣೇ. ನೋಡು ನೀನು ಕೋಪ ಬಿಟ್ಟು ಸರಿಯಾಗಿ ಮಾತಾಡಿದರೆ ಒಂದು ತಮಾಷೆ ಕೊಡುತ್ತೇನೆ" ಎಂದೆ ನಾನು.

"ಹೋಗೋ, ಹೋಗೋ, ಅನ್ನುವುದು ಅಂದು ಈಗ ಸಮಾಧಾನ ಮಾಡಲು ಬರುತ್ತಾನೆ. ನಾನೇನು ಎಳೆಮಗುವಲ್ಲ" ಎಂದಳು ಹುಸಿ ಮುನಿಸಿನಿಂದ. ಈಗ ಕೋಪ, ದುಃಖವೆಲ್ಲಾ ತಣ್ಣಗಾಗಿತ್ತು.

"ಹಾಗಾದರೆ ಬಿಡು" ಅಂದೆ ನಾನು ಅಲ್ಲಿಂದ ಹೊರಡುವವನಂತೆ.

"ಅದೇನು ಹೇಳು ಮತ್ತೆ" ಎಂದಳು.

ಈಗ ಲಲಿತೆಯ ಮುಖದಮೇಲೆ ನಗು ಬಂದಿತ್ತು. ಮಳೆ ಬಂದ ಮೇಲೆ ತೋಟದ ಹಸುರಿನ ಬಣ್ಣಕ್ಕೊಂದು ಹೊಸತನ ಬಂದಂತೆ ಆ ನಗೆಗೊಂದು ಹೊಸ ಮಾಧುರ್ಯವಿತ್ತು.

"ಕವಿಯೊಂದು ಕಾದಂಬರಿ ಬರೆದಿದಾನೆ. ಅವರ ಹಸ್ತ ಪ್ರತಿ ನನ್ನ ಹತ್ತಿರ ಇದೆ. ಈವತ್ತು ಬೆಳಿಗ್ಗೆ ನೀನು ನೋಡಿದೆಯಲ್ಲಾ ಆಗ ಅದನ್ನು ಕೊಡಲೆಂದು ಅವನು ಬಂದಿದ್ದುದು."

"ಹಾಗಾದರೆ ಅದನ್ನು ತಂದುಕೊಡು. ಈವತ್ತು ರಾತ್ರಿಯೇ ಓದಿಬಿಡುತ್ತೇನೆ."

ನಾನು ಕೊಂಚ ಕೀಟಲೆ ಮಾಡಿ ಅನಂತರ 'ಮೂರು ಮೊಗ್ಗು' ಕಾದಂಬರಿಯ ಹಸ್ತ ಪ್ರತಿಯನ್ನು ತಂದುಕೊಟ್ಟೆ. "ಈಗಲೇ ಓದಲಾರಂಭಿಸುತ್ತೇನೆ" ಎಂದು ಲಲಿತಾ ಒಳಕ್ಕೆ ಬಂದಳು. ಆ ಕಡೆಯಿಂದ ನನ್ನನ್ನು ಹುಡುಕಿಕೊಂಡು ಶ್ಯಾಮನೂ ಬಂದ.

ಶ್ಯಾಮನಿಗೆ ನಾನು ಎಲ್ಲವನ್ನು ಹೇಳಿದೆ. ಅವನ ಮಾತಿನಲ್ಲಿ ಏನೂ ಹುರುಳಿಲ್ಲವೆಂದೇನೋ ಹೇಳಿದರೂ, ನನ್ನ ಮಾತಿನಲ್ಲಿ ನನಗೆ ನಂಬಿಕೆ ಪೂರ್ಣವಾಗಿರಲಿಲ್ಲ. ಶ್ಯಾಮ್ ಎಲ್ಲವನ್ನು ಕೇಳಿ, ತಾನು ಹೇಳಿದುದೇ ಸರಿಯೆಂದು ಹೇಳಿದ. ಲಲಿತೆ, ಕವಿಗಳ ಬಗ್ಗೆ ಆತ ಕೊಂಚ ಹುಷಾರಾಗಿರಬೇಕೆಂದು ಎಚ್ಚರಿಕೆ ಕೊಟ್ಟ. ಆ ದಿನ ಲಲಿತೆಯ ನಡುವಳಿಕೆಯಿಂದ ಲಲಿತೆಗೂ ಕವಿಯ ಬಗ್ಗೆ ಸ್ವಲ್ಪ ಹೃದಯ ಮಿಡಿತ ವಿರಬಹುದೆಂದೂ ಸೂಕ್ಷ್ಮವಾಗಿ ಸೂಚಿಸಿದ. ಏನಾದರೂ ಆಗಲಿ, ಅದು ತನ್ನ ವಿಚಾರವಲ್ಲ. ತನಗೂ ಅದಕ್ಕೂ ಸಂಬಂಧವಿಲ್ಲ. ಎಲ್ಲಾ ನಾನು

ನೋಡಬೇಕಾದುದು. ತಾನು ಅದರಲ್ಲಿ ಬಾಯಿ ಹಾಕುವುದಿಲ್ಲವೆಂದೂ ಹೇಳಿಬಿಟ್ಟ. ಅವನ ಮಾತಿನಿಂದ ನನ್ನ ಮನಸ್ಸಿನ ಸಂದೇಹ ಇನ್ನೂ ಬಲವಾಯಿತು. ಲಲಿತೆ ಆಗತಾನೇ ಆಡಿದ್ದ ಮಾತುಕೂಡ ಇದಕ್ಕೆ ಸಾಕ್ಷಿಯಾಗಿಯೇ ಕಾಣಿಸಿತು.!

ಮರುದಿನ ಲಲಿತಾ ಹಸ್ತಪತ್ರಿಕೆಯನ್ನು ಓದಿ ಮುಗಿಸಿ ಮನಸ್ವೀ ಹೊಗಳಿದಳು. ಯೌವನದ ಮನಸ್ಸಿಗೆ ಬಹಳ ಸುಲಭವಾಗಿ ದುರಂತ ಕತೆ ಹಿಡಿಯುತ್ತದೆ. ' ಮೂರು ಮೊಗ್ಗು' ದುರಂತ ಚಿತ್ರ. ಅದನ್ನೋದಿ ಹೆಣ್ಣಿಗೆ ಸಹಜವಾಗಿ ಲಲಿತಾ ಕಣ್ಣೀರು ಕರೆದಿದ್ದಳು. ಅಲ್ಲಿಯ ನಾಯಕಿ—ಅಂದರೆ ಮುಖ್ಯ ಹೆಣ್ಣುಪಾತ್ರದ ಸಜೀವಚಿತ್ರ ಯಾರ ಕಲ್ಲೆದೆಯನ್ನಾದರೂ ಕರಗಿಸುವಂತಹುದು. ಅದು ಲಲಿತೆಯ ಮನಸ್ಸನ್ನು ಆಕ್ರಮಿಸಿದುದೇನೊ ಆಶ್ಚರ್ಯವಿಲ್ಲ. ನಾನು ಓದಿದಮೇಲೆ ನನಗೂ ಆ ಕಾದಂಬರಿ ಬಹಳ ಸುಂದರವಾಗಿ ಕಾಣಿಸಿತು. ಕವಿಯ ಸೂಕ್ಷ್ಮಹೃದಯ ಪಾದರಸದಷ್ಟು ತೀಕ್ಷ್ಣವೇಗಿಯಾಗಿತ್ತು. ನೂರುಬಗೆಯ ಅನುಭವಗಳನ್ನು ತನ್ನದಾಗಿಸಿ ಕೊಂಡಿತ್ತು. ಆ ಅನುಭವಗಳ ರಸಪಾಕವನ್ನು ಭಟ್ಟಿಯಿಳಿಸಿದಂತಿತ್ತು ಕಾದಂಬರಿ.

ಆದರೆ ಲಲಿತೆ ಆ ಕಾದಂಬರಿಯನ್ನು ಹೊಗಳಿದಾಗ ನನಗೆ ಮನಸ್ಸು ಸಮಾಧಾನವಿರಲಿಲ್ಲ. ಸಮಾಧಾನಕ್ಕೆ ಬದಲು ನಿರಾಸಕ್ತಿ! ಅನಾದರ! ಶ್ಯಾಮನ ಮಾತು ನನ್ನ ಮನಸ್ಸಿನಲ್ಲಿ ಬರೆಯೊತ್ತಿದಂತಾಗಿತ್ತು. ಈಗ ನನ್ನ ಕಣ್ಣಿಗೆ ಅನುಮಾನದ ತೆರೆ ಬಿದ್ದಿತ್ತು. ಸಂದೇಹದ ತೆರೆಯ ಮೂಲಕ ನೋಡುತ್ತಿದ್ದ ನನಗೆ ಪ್ರತಿಯೊಂದೂ ವಿವರ್ಣವಾಗಿ, ವಿಪರೀತವಾಗಿ ಕಾಣಿಸಿತು. ಆ ದಿನ ನಾನು ಲಲಿತೆಯೊಂದಿಗೆ ಮಾತನಾಡುವಾಗ ಬಹಳ ಸೂಕ್ಷ್ಮವಾಗಿ ಎಚ್ಚರದಿಂದ ಅವಳನ್ನೇ ಪರೀಕ್ಷಿಸುತ್ತಿದ್ದೆ. ಅವಳ ಮಾತಿನ ಮೂಲಕ ಭೂತಕನ್ನಡಿಯಿಂದ ಇಲ್ಲದುದನ್ನು ಹುಡುಕುತ್ತಿದ್ದೆ.

ಆ ದಿನ ನಡೆದ ಇನ್ನೊಂದು ಸಂಗತಿಯೆಂದರೆ ಯಮುನೆಯ ಮದುವೆ ಗೊತ್ತಾದುದು. ಆ ದಿನವೇ ಸಂಜೆ ಗಂಡಿನ ಕಡೆಯವರು ಯಮುನೆಯನ್ನು ನೋಡಲು ಅಲ್ಲಿಗೆ ಬರುವರೆಂದು ಲಲಿತಾ ಹೇಳಿದಳು. ಹಾಸನದಿಂದ ಯಮುನೆಯ ತಾಯಿತಂದೆ ಇಬ್ಬರೂ ಬಂದರು. ಮಧ್ಯಾಹ್ನ ನಾನು

ಕಾಲೇಜಿನಿಂದ ಹಿಂದಿರುಗಿದಾಗ ಯಮುನೆಯ ತಂದೆ ಬಾಗಿಲಿನ ಹತ್ತಿರ ನಿಂತಿದ್ದವರು ‘ ಸೀನು, ಬಾರಯ್ಯ’ ಎಂದು ಕರೆದರು.

ನಾನು ಬಾಗಿಲಿನ ಹತ್ತಿರ ಹೋಗಿನಿಂತೆ. ಆಮಾತು ಈ ಮಾತೆಲ್ಲಾ ಆಯಿತು. ನಾನು ಜೂನಿಯರ್ ಬಿ. ಎ. ಯಲ್ಲಿ ಓದುತ್ತಿದ್ದುದನ್ನು ಹೇಳಿದೆ. ಆನರ್ಸ್ ತೆಗೆದುಕೊಳ್ಳಲು ಆಸೆಯಿದ್ದರೂ ಅದು ಹೆಚ್ಚು ಖರ್ಚು, ಒಂದು ವರ್ಷ ಹೆಚ್ಚಿಗೆ ಓದಬೇಕಾದ್ದರಿಂದ ತೆಗೆದುಕೊಳ್ಳಲಿಲ್ಲವೆಂದೂ ಹೇಳಿದೆ. ಜತೆಗೆ ಬರಿಯ ಬಿ.ಎ. ಆದರೇನು, ಆನರ್ಸೇನು ಎಲ್ಲವೂ ಒಂದೇ ಎಂದು ಅವರೂ ಅಂದರು. ನಾವು ಮಾತನಾಡುತ್ತ ನಿಂತಿರುವಾಗಲೇ ಲಲಿತಾ ಕೂಡ ಕಾಲೇಜಿನಿಂದ ಬಂದಳು. ಬೆವರುತ್ತಿದ್ದ ಮುಖ, ಬೆಳಗಿನಿಂದ ಕಾಲೇಜಿನಲ್ಲಿ ಪಾಠಹೇಳಿ ಸುಸ್ತಾಗಿತ್ತು. ಬಿಸಿಲಿನಲ್ಲಿ ಬೇರೆ ಅಲ್ಲಿಂದ ನಡೆದುಕೊಂಡು ಬಂದಿದ್ದಳು. ಮುಖ ಅದರಿಂದ ಕಂದಿದ ಹಾಗಿತ್ತು. ಆಗತಾನೇ ಅತ್ತು ಅತ್ತು ಸುಸ್ತಾಗಿ ನಿದ್ದೆಹೋದ ಮಗುವಿನ ಮುಖದಂತೆ ಮುದ್ದಾಗಿತ್ತ ಮುಖ. ಒಳಕ್ಕೋಡಿಹೋಗಿ ಪುಸ್ತಕಗಳನ್ನಿಟ್ಟು ಮುಖ ತೊಳೆದುಕೊಂಡು, ಮೇಲೆ ತೆಳ್ಳಗೆ ಪೌಡರ್ ಹಚ್ಚಿಕೊಂಡು ಬಂದಳು. ಅವರ ತಾಯಿಯೂ ಬಂದು ಅಲ್ಲಿಯೇ ವರಾಂಡದಲ್ಲಿದ್ದ ಕುರ್ಚಿಯಲ್ಲಿ ಕುಳಿತರು. ನಾನು ಒಂದು ಕಂಬವನ್ನೊರಗಿಕೊಂಡು ನಿಂತಿದ್ದೆ. ನನ್ನ ಎದುರಿಗೇ ಕಂಬವನ್ನೊರಗಿಕೊಂಡು ಸೀರೆಯ ಸೆರಗಿನ ತುದಿಯನ್ನು ಎಡಗೈ ಕಿರುಬೆರಳಿಗೆ ನುಲಿಯುತ್ತಾ ಲಲಿತಾ ನಿಂತಿದ್ದಳು. ಯಮುನಾ ಒಳಗೆ ಇದ್ದಳು. ವಧು ಪರೀಕ್ಷೆಗೋಸ್ಕರ ಸಿದ್ಧವಾಗುತಿದ್ದಳೋ ಏನೋ!

“ ಇನ್ನೇನು ಯಮುನೆಯ ಮದುವೆ ಗೊತ್ತಾದಹಾಗೆಯೇ. ಗಂಡು ಒಪ್ಪಿಯಾಗಿದೆ. ಅವರ ಮನೆಯವರು ಒಪ್ಪುವುದು ಕಷ್ಟವಲ್ಲ. ಅದೇನು ನೆಪಮಾತ್ರಕ್ಕೆ ಈ ನೋಡುವುದು” ಎಂದರು ಯಮುನೆಯ ತಂದೆ.

ಲಲಿತಾ ನನ್ನ ಕಡೆ ನೋಡಿ ನಕ್ಕಳು. ಮುಖದಲ್ಲಿ ಬಾರದ ಬೆವರನ್ನು ಕರವಸ್ತ್ರದಿಂದ ಒರಸಿಕೊಂಡಳು. ಕೈನುಲಿಯುವುದು ಮಾತ್ರ ನಿಲ್ಲಲಿಲ್ಲ.

“ಇನ್ನು — ಯಮುನೆಯದಾದಮೇಲೆ ಲಲಿತಾ— ”ತಾಯಿ ಅಂದರು.

“ ಥೂ, ಹೋಗಮ್ಮ ” ಎಂದಳು ಲಲಿತಾ ನಾಚಿಕೆಯಿಂದ ಮುಖ ರಂಗೇರಿ. ಅವಳು ಹಾಗಂದರೂ ಧ್ವನಿಯಲ್ಲೊಂದು ಬಗೆಯ ಹಿಗ್ಗಿತ್ತು.

“ಅಯ್ಯೋ ! ನಾನು ಮದುವೆಯಾಗುವ ಮೊದಲು ನಿನ್ನಹಾಗೆಯೇ ಆಡುತ್ತಿದ್ದೆ. ಆದರೆ ಒಳಗೇ ಮದುವೆಯ ಆಸೆಯಿತ್ತು”

“ ನಾನೇನೂ ಮದುವೆಯಾಗುವುದೇ ಇಲ್ಲ ” ಎಂದಳು ಲಲಿತಾ ತೀರ್ಮಾನ ಮಾಡಿದವಳಂತೆ.

ನಾನು ಲಲಿತಳನ್ನೇ ದಿಟ್ಟಿಸಿ ನೋಡುತ್ತಿದ್ದೆ. ಅವಳ ನೋಟ ನನ್ನ ಮೇಲೆ ಬಿತ್ತು. ಕೂಡಲೇ ಅವಳ ಕಣ್ಣು ಪುಲಕಿಸಿತು. ನಾಚಿಕೆ ಹೆಚ್ಚಿ ಅಲ್ಲಿಂದ ಒಳಕ್ಕೆ ಓಡಿಬಿಟ್ಟಳು.

“ ನಮ್ಮ ಸೀನುವೇ ಯಾಕೆ ಮದುವೆಯಾಗಬಾರದು ? ಎಂದರು ತಂದೆ.

ಈಗ ನಾಚಿಕೊಳ್ಳುವುದು ನನ್ನ ಭಾಗಕ್ಕೆ ಬಂತು. ಅವರು ಆ ಮಾತನ್ನು ಹೇಳುವರೇ ಎಂದು ನಾನೇನೋ ಕಾತರಿಸಿದ್ದೆ. ಆದರೆ ಆ ಮಾತು ಬಂದಾಗ ಮಾತ್ರ ನನ್ನ ಎದೆಬಡಿತ ತಪ್ಪಿತು. ಒಮ್ಮೆಗೆ ರಕ್ತ ಜಲಪಾತದಂತೆ ನುಗ್ಗಿದಂತಾಯಿತು. ಕಟ್ಟೆಯೊಡೆದ ನದಿಯ ನೀರಿನಂತೆ ಮೈಯನ್ನೆಲ್ಲಾ ನಡುಗಿಸಿತು. ಹೃದಯ ಜಿಲ್ಲೆಂದಿತು.

“ನಿಜ. ಇಬ್ಬರೂ ಹೇಗಿದ್ದರೂ ಅನ್ಯೋನ್ಯವಾಗಿದಾರೆ.” ತಾಯಿಯೂ ಸಮ್ಮತಿಕೊಟ್ಟರು.

ಕಿಟಕಿಯಿಂದ ಒಳಗೆ ಹೊಂಚುಹಾಕಿ ಕೇಳುತ್ತಿದ್ದ ಲಲಿತೆಯ ಮುಖ ಮಿಂಚಿತು. ನಾನು ಆರನೆಯ ಸ್ವರ್ಗದಲ್ಲಿರುವಂತೆ ನನಗನ್ನಿಸಿತು.

ಅಂದು ರಾತ್ರಿಯೆಲ್ಲಾ ನನಗೆ ಆ ಹಿಗ್ಗಿನಲ್ಲಿ. ನಿದ್ದೆಮಾಡಲಿಲ್ಲ. ಹಾಸಿಗೆಯಮೇಲೆ ಮಲಗಿಕೊಂಡು ಸುಮ್ಮನೆ ಕಣ್ಣು ತೆರೆದುಕೊಂಡು ದಿಟ್ಟಿಸುತ್ತಿದ್ದೆ. ಕೋಣೆಯ ಕತ್ತಲಿನಲ್ಲಿ ಕೋಟಿ ಕಾಮಧೇನುಗಳು ಮೂಡಿದವು. ಕಲ್ಪನೆಯ ಕನಸು ಬಣ್ಣಬಣ್ಣವಾಗಿ ಬಂದು ಕುಣಿಯಿತು. ನಾನು ಲಲಿತೆಯನ್ನು ಮದುವೆಯಾದಂತೆ. ಅವಳೊಂದಿಗೆ ನಾನು ಆಡುವ ಚಕ್ಕಂದ, ಚೆಲುವಾಟ, ನಲುಮೆಯ ಆಟ ಎಲ್ಲವನ್ನು, ನಾಳಿನ ಕನಸ್ಸನ್ನು

ನನ್ನ ಮನಸ್ಸು ರೂಪಿಸುತ್ತಿತ್ತು. ಇನ್ನೇನು ಯಮುನೆಯ ಮದುವೆ ಕ್ರಿಸ್ ಮಸ್ ರಜೆಯಲ್ಲಿ ಎಂದು ಗೊತ್ತಾಗಿತ್ತು. ಅದು ಮುಗಿದೊಡನೆಯೇ ಲಲಿತೆಯೊಂದಿಗೆ ನನ್ನ ಮದುವೆ! ಎಂತಹ ಒಳ್ಳೆಯದಿನ ! ಹರಯದ ಹೊಸದರಲ್ಲಿ ಹೊರತಾಗಿ ಹೃದಯದಲ್ಲಿ ಬಯಕೆ ಮೊಳಕೆಯಿಟ್ಟಾಗ ಕನಸು ಕಟ್ಟುವಂತೆ ನಾನೂ ಕನಸು ಕಟ್ಟಿದೆ. ಕವಿಯ ಮೇಲಿದ್ದ ನನ್ನ ಅನುಮಾನ ಸಂದೇಹಗಳು ಈಹಿಗ್ಗಿನಪ್ರವಾಹದಲ್ಲಿ ಕಸದಂತೆ ತೇಲಿಕೊಂಡುಹೋದುವು. ಮನಸ್ಸು ಆನಂದಮಯವಾಗಿತ್ತು.

೧೧

ಯಮುನೆಯ ಮದುವೆಯನ್ನು ಮುಗಿಸಿಕೊಂಡು ನಾನು ಮೈಸೂರಿಗೆ ಹಿಂತಿರುಗಿದೆ. ಯಮುನೆಯ ಗಂಡ ಬಹಳ ಒಳ್ಳೆಯವನಾಗಿ ತೋರುತ್ತಿದ್ದ. ಅವನೂ ವಿದ್ಯೆ ತಿಳಿಯದವನಲ್ಲ. ಚೆನ್ನಾಗಿ ಓದಿತಿಳಿದ ಸಹೃದಯಿ ಯಾದವನಂತೆ ತೋರುತ್ತಿದ್ದ. ಆಗಾಗ ವರ್ಡ್ಸ್‌ವರ್ತ್, ಷೇಕ್ಸ್‌ಪಿಯರ್, ಕೀಟ್ಸ್ ಮುಂತಾದವರ ಕವಿತೆಗಳ ಸಾಲನ್ನು ಹೇಳುತ್ತಿದ್ದ. ಡಿಗ್ರಿ ತೆಗೆದುಕೊಳ್ಳದಿದ್ದರೂ ಡಿಗ್ರಿ ತೆಗೆದುಕೊಂಡವರಿಗಿಂತ ಚೆನ್ನಾಗಿ ಸಾಹಿತ್ಯ ಪರಿಚಯ ಇರುವವನಂತೆ ತೋರಿದ. ಯಮುನಾ ಇನ್ನೆರಡು ತಿಂಗಳು ಓದಿದರೆ ಪರೀಕ್ಷೆ ಬರುತ್ತದೆ. ಅದನ್ನು ಮುಗಿಸಿಕೊಳ್ಳಲಿ ಎಂದೂ ಒಪ್ಪಿದ. ಮದುವೆಯ ಮನೆಯಲ್ಲಿ ನನ್ನ ಹೆಸರನ್ನೂ ಲಲಿತೆಯ ಹೆಸರನ್ನೂ ಕೂಡಿಸಿ ಗಂಡಸರು ಹೆಂಗಸರೆಲ್ಲ ಆಡಿಕೊಳ್ಳುತ್ತಿದ್ದರು. ಆಗ ನನ್ನ ಹೃದಯ ಹುಲ್ಲೆಯಮರಿಯಾಗುತ್ತಿತ್ತು. ಜಿಗಿದು, ನೆಗೆದು, ಹಾರಾಡಿ, ಲಲಿತೆಯ ಬಳಿಗೋಡಿಹೋಗುತ್ತಿತ್ತು. ಆದರೆ ನನ್ನ ತಾಯಿ ತಂದೆ ಇದನ್ನೊಪ್ಪಲಾರರೆನ್ನುವ ಯೋಚನೆ ನನಗೆ ಬರಲೇ ಇಲ್ಲ. ಬಂದರೂ ಅದರ ಬಾಯಿಗೆ ಬಟ್ಟೆ ತುರುಕಿ ನನ್ನ ಕನಸನ್ನು ನಾನು ಕಟ್ಟುತ್ತಿದ್ದೆ.

ಯಮುನೆಯ ಮದುವೆಗೆ ಶ್ಯಾಮನನ್ನು ಕರೆದುಕೊಂಡು ಹೋಗಲು ಪ್ರಯತ್ನಿಸಿದೆ. ಆದರೆ ಅದೇಕೋ ಏನೋ ಅವನು ಬರಲು ಒಪ್ಪಲಿಲ್ಲ. ಈಚೆಗೆ ನನ್ನ ಹತ್ತಿರ ಮೊದಲಿನಂತೆ ಮಾತನಾಡುತ್ತಿರಲಿಲ್ಲ. ತಾನು ತನ್ನ ಹಿರಿತನವನ್ನು ಬಿಟ್ಟುಬಿಟ್ಟವನಂತೆ, ಏನನ್ನೋ ಕಳೆದುಕೊಂಡವನಂತೆ ಆಡುತ್ತಿದ್ದ. ನನಗೆ ಇದು ಕೊಂಚ ಆಶ್ಚರ್ಯವಾಗಿ ಕಾಣಿಸಿತು. ನಾನು ಅವನ ನೆರಳಿನಂತೆ, ಅವನು ಹೇಳಿದಂತೆಲ್ಲಾ ನಡೆದುಕೊಳ್ಳುತ್ತಿದ್ದೆ. ಅವನಂದುದನ್ನು ಚಾಚೂ ತಪ್ಪದೆ ನಡೆಸುತ್ತಿದ್ದೆ. ಆದರೂ ನನ್ನ ವಿಷಯಕ್ಕೆ ಅವನ ವಿಶ್ವಾಸ ಯಾಕೋ ತಣ್ಣಗಾದಂತೆ ತೋರಿತು. ಒಂದೊಂದು ಸಾರಿ ಹಾಗನ್ನಿಸಿದಾಗಲೂ ನಾನೇ ತಿಳಿದುಕೊಂಡಿದೇನೆ. ಅವನು ಮೊದಲಿನಂತೆಯೇ ಇದಾನೆಂದು ನಾನು ಸಮಾಧಾನ ಮಾಡಿಕೊಳ್ಳುತ್ತಿದ್ದೆ. ಮೊದಲು ಪ್ರತಿದಿನವೂ ಸಂಜೆ ಸಂಚಾರಕ್ಕೆ ಹೋಗುತ್ತಿದ್ದೆವು. ಜತೆಯಲ್ಲಿ ಸುತ್ತಿಕೊಂಡು ಬಂದು, ಆ ಮಾತು ಈ ಮಾತು ಹರಟೆ ಕೊಚ್ಚುವುದು ನಮ್ಮ

ದಿನದ ಕಾರ್ಯಕ್ರಮವಾಗಿತ್ತು. ಆದರೆ ಕವಿಯ ಪರಿಚಯವಾದ ದಿನದಿಂದ ಕೊಂಚ ಬದಲಾವಣೆ ಕಾಣಿಸಿತು. ಕವಿ ಒಂದೊಂದು ದಿನ ಸಂಜೆ ನಮ್ಮ ಜತೆ ಸೇರುತ್ತಿದ್ದ. ಆಗ ಶ್ಯಾಮ್ ಮಾತನ್ನೇ ಆಡುತ್ತಿರಲಿಲ್ಲ. ಮಾಡಬಾರದ ಕೆಲಸ ಮಾಡಿದವನಂತೆ, ಎಳ್ಳು ದಾನತೆಗೆದುಕೊಂಡ ಬ್ರಾಹ್ಮಣನಂತೆ ಮುಖ ಮಾಡಿಕೊಂಡಿರುತ್ತಿದ್ದ. ನಾವು ಏನು ಮಾಡಿದ್ಧರೂ ಬಾಯೇ ಬಿಡುತ್ತಿರಲಿಲ್ಲ. ಅಷ್ಟೂ ಬಲವಂತ ಮಾಡಿದರೆ 'ಹಾಂ' 'ಹುಂ' ಅಂದು ಮುಗಿಸಿಬಿಡುತ್ತಿದ್ದ. ಕವಿ ನಮ್ಮ ಜತೆಗೆ ಬಾರದದಿನ ಜೋರಾಗಿಯೇ ಮಾತನಾಡುತ್ತಿದ್ದ. ನಾನು ಕವಿಯನ್ನು ಹೊಗಳಿತೆಂದರೆ ಸಾಕು ಅವನ ಮುಖ ಬಿರುಸಾಗುತ್ತಿತ್ತು. ಲಲಿತಾ, ಯಮುನಾ ಕವಿಯನ್ನು ಹೊಗಳಿದರೆಂದರೆ ಒಂದು ಬಗೆಯಾಗಿ ಮಾತು ಹಾರಿಸುತ್ತಿದ್ದ.

''ಚ್! ಏನು ಕವಿ ? ಇವನೇನುತಾನೆ ಬರೆಯಬಲ್ಲ. ಉಳಿದವರೂ ಬರೆಯುತ್ತಾರೆ....ಇವನಂತಹ ಸಾವಿರ ಜನ'' ಎಂದು ತಿರಸ್ಕರಿಸುತ್ತಿದ್ದ.

''ಅವನನ್ನು ಏನು ಅಟ್ಟಕ್ಕೇರಿಸುತ್ತೀರೋ ಸುಮ್ಮನೆ. ಅವನ ಹಾಗೆ ನಾನೂ ಬರೆದೇನು!'' ಎಂದು ಅಲ್ಲಗಳೆಯುತ್ತಿದ್ದ.

''ಕವಿಯಂತೆ ಕವಿ! ಸರಿಯಾಗಿ ಮಾತನಾಡಲು ಬರುವುದಿಲ್ಲ. ನಾಲ್ಕು ಜನದ ಜತೆಯಲ್ಲಿ ಹೇಗಿರಬೇಕೆಂದು ಗೊತ್ತಿಲ್ಲ. ದೊಡ್ಡದಾಗಿ ಕವಿತೆ ಬರೆಯುತ್ತಾನೆ. ಈಗ ಕಾದಂಬರಿ ಬೇರೆ! ಮಹಾ ಕಾದಂಬರಿಕಾರ?" ಎಂದು ಮೂದಲಿಸುತ್ತಿದ್ದ.

''ಪ್ರೇಮ ಬೇರೆ! ಅದೊಂದು ಸಾಲದಾಗಿತ್ತು. ಇವನ ಮುಸುಡಿ ಕಂಡು ಪ್ರೀತಿಸುವ ಆ ಹುಡುಗಿ ಇನ್ನು ಯಾವ ರತಿಯೋ!'' ಎಂದು ವಿಕಟವಾಗಿ ನಗುತ್ತಿದ್ದ.

ಅವನೇನೆಂದರೂ ನಾನು ಅದಕ್ಕೆ ಮರುಮಾತಾಡುತ್ತಿರಲಿಲ್ಲ ನಿಜವಾಗಿ ಹೇಳುವುದಾದರೆ, ಅಂತಹ ಕ್ಷಣಗಳಲ್ಲಿ ಶ್ಯಾಮನನ್ನ ಕಂಡರೆ. ನನಗೆ ಭಯವಾಗುತ್ತಿತ್ತು. ಆದ್ದರಿಂದ ಅವನೇನೆಂದರೂ ಸುಮ್ಮನೆ ಕೇಳಿಕೊಂಡಿರುತ್ತಿದ್ದೆ. ಅವನು ಅನ್ನುವುದೆಲ್ಲ ತಪ್ಪೆಂದು ನನಗೆ ತೋರಿದರೂ ಅವನ ವಿರುದ್ಧ ಮಾತಾಡುವ ಧೈರ್ಯ ನನಗಿರಲಿಲ್ಲ. ಶ್ಯಾಮನ ಮನಸ್ಸಿನಲ್ಲಿ ಕವಿಯಬಗ್ಗೆ ಇಷ್ಟೊಂದು ಕಟುತ್ವ, ಹಾಲಾಹಲವಿರಲು

ಕಾರಣವೇನೆಂಬುದು ನನಗೆ ತಿಳಿಯಲಿಲ್ಲ. ಅವನನ್ನೇ ಕೇಳಿದರೂ ಅವನು ಏನೂ ಹೇಳುತ್ತಿರಲಿಲ್ಲ. ಆದರೆ ಕೆಲವು ದಿನಗಳನಂತರ ಅದು ತಾನಾಗಿಯೇ ತಿಳಿಯಿತು.

ಆ ದಿನ ಶಾಮ್ ಕಾಲೇಜಿನಿಂದ ಮನೆಗೆ ಹೋಗುವಾಗ ದಾರಿಯಲ್ಲಿ ಅವನೊಂದಿಗೆ ನಾಟಕದಲ್ಲಿ ಪಾತ್ರವಹಿಸುತ್ತಿದ್ದವನೊಬ್ಬ ಎದುರಿಗೆ ಸಿಕ್ಕಿದ. ಅವನು ಶ್ಯಾಮನಿಗೆ ಬಹಳ ಭಕ್ತಿಯಿಂದ ನಮಸ್ಕರಿಸಿದ. ಅನಂತರ ಕೊಂಚ ದೂರ ನಮ್ಮ ಜೊತೆಗೇ ಬಂದ. ಮಾತು ನಾಟಕಗಳ ವಿಷಯಕ್ಕೆ ತಿರುಗಿತು. ಶ್ಯಾಮನನ್ನ ಎಲ್ಲರೂ ಹೊಗಳುವವರೇ. ಹಾಗೆ, ಹೀಗೆ, ಅವನಂತಹ ನಟನಿಲ್ಲವೆಂದು ಎಲ್ಲರೂ ಹೊಗಳುತ್ತಿದ್ದರು. ಅವನ ಹಾಡುಗಾರಿಕೆಯನ್ನು ಹೊಗಳುತ್ತಿದ್ದರು. ಆದರೆ ಈ ಹಾಡುಗಾರಿಕೆಗೆ ಮಾತ್ರ ಇವನಿಗಿಂತಲೂ ಹೆಚ್ಚಿಗೆ ಮೆಚ್ಚಾದವನು ಕವಿ. ಈಗ ಯಾವಸಭೆಯಲ್ಲಿ ಕವಿಯನ್ನು ಕಂಡರೂ ಅವನಿಂದ ಕವಿತೆಯೊಂದನ್ನು ಹಾಡಿಸುತ್ತಿದ್ದರು. ಶ್ಯಾಮನ ಜತೆಗಾರ ಕವಿಯನ್ನು ಹೊಗಳಿದ. ಶ್ಯಾಮ್ ಕವಿಯ ಹಾಡಿಕೆಯನ್ನು ಅಲ್ಲಗಳೆದ.

''ಅವರಿಗೇನುಗೊತ್ತು ಹಾಡುವುದು. ತಾಳವಿಲ್ಲ. ರಾಗವಿಲ್ಲ'' ಎಂದ.

ಅವನ ಸ್ನೇಹಿತನೂ ಆ ಮಾತನ್ನು ಒಪ್ಪಲು ಮನಸ್ಸಿಲ್ಲದಿದ್ದರೂ ಒಪ್ಪಿದ. ನನಗೆ ಕೂಡಲೇ ಅನಿಸಿತು ಶ್ಯಾಮನಿಗೆ ಕವಿಯಬಗ್ಗೆ ಅಸೂಯೆ ಯೆಂದು. ತನ್ನನ್ನಲ್ಲದೆ ಮತ್ತಾರನ್ನು ಹೊಗಳಕೂಡದು. ತನ್ನನ್ನು ಬಿಟ್ಟರೆ ಇನ್ನಿಲ್ಲವೆನ್ನುವ ಪ್ರಕೃತಿ ಅವನದು. ಈಗ ಗೀತಗಳನ್ನು ಹಾಡುವುದರಲ್ಲಿ ತನಗಿಂತ ಜನರ ಮೆಚ್ಚುಗೆಗೆ ಪಾತ್ರನಾದವನಲ್ಲ ಕವಿ ಎಂದು ಹೊಟ್ಟೆಯುರಿ.

ಇದಕ್ಕೆ ಅನುವಾಗಿ ಮತ್ತೊಂದು ಸಂಗತಿ ಕೂಡ ನಡೆದಿತ್ತು. ನನಗೆ ಅದು ತಿಳಿದುದೂ ಆ ದಿನವೇ. ಇದುವರೆಗೂ ಆ ವಿಷಯವನ್ನು ಶ್ಯಾಮ್ ನನ್ನಿಂದ ಬಚ್ಚಿಟ್ಟಿದ್ದ. ಅದು ಯಾತಕ್ಕೆಂಬುದು ತಿಳಿಯಲಿಲ್ಲ. ತನ್ನ ಹಿರಿತನವನ್ನು ಪ್ರದರ್ಶಿಸುವುದರಲ್ಲಿ ಈ ಸೋಲನೊಪ್ಪಿಕೊಳ್ಳಲು ಅವನು ಸಿದ್ಧನಾಗಿರಲಿಲ್ಲ. ನಾನು ಆ ಸೋಲನ್ನು ತಿಳಿದರೆ ಎಲ್ಲಿ ನನ್ನ ಮೆಚ್ಚುಗೆ ತಗ್ಗಿಹೋದೀತೋ ಎಂದು ಅವನ ಹೆದರಿಕೆಯಿದ್ದಿರಬೇಕು. ಆ ದಿನ ರಾತ್ರಿ ನಾನು ಮನೆಗೆ ಬಂದಮೇಲೆ ಪಕ್ಕದ ಮನೆಯಿಂದ ನಮ್ಮ ತಾಯಿ ತಂದಿದ್ದ

ಹಳೆಯ ಪತ್ರಿಕೆಗಳನ್ನೆಲ್ಲಾ ನೋಡುತ್ತಿದ್ದೆ. ಅದರಲ್ಲಿ ನಾಲ್ಕೈದು ತಿಂಗಳ ಹಿಂದಿನ ಒಂದು ಪತ್ರಿಕೆಯಲ್ಲಿ ಕತಾಸ್ಪರ್ಧೆಯ ವಿಷಯವಿತ್ತು. ಕಾಲೇಜಿನ ವಿದ್ಯಾರ್ಥಿಗಳಿಗಾಗಿ ಕತಾಸ್ಪರ್ಧೆಯನ್ನು ಏರ್ಪಡಿಸಿ, ಇಪ್ಪತ್ತು ರೂಪಾಯಿಗಳ ಮೊದಲ ಬಹುಮಾನವನ್ನಿಟ್ಟಿದ್ದರು. ಈ ಕತಾಸ್ಪರ್ಧೆಯಲ್ಲಿ ಶ್ಯಾಮ್ ನನಗೆ ಗೊತ್ತಿಲ್ಲದಂತೆ ಭಾಗವಹಿಸಿದ್ದ. ತಾನು ಕತೆ ಬರೆಯುವೆನೆಂದು ಹೇಳಲು ಅವನಿಗೆ ನಾಚಿಕೆಯಾಗಿತ್ತೋ ಏನೋ. ಅಥವಾ ಬಹುಮಾನ ತನಗೆ ಬಂದೇ ತೀರುತ್ತದೆ. ಬಂದ ಮೇಲೆ ಅದನ್ನು ತೋರಿಸಿಕೊಂಡು ಮೆರೆಯೋಣವೆಂದುಕೊಂಡಿದ್ದನೋ ಏನೋ, ಅಂತೂ ಕತೆ ಬರೆದುದು, ಕಳುಹಿಸಿದೊಂದನ್ನು ನನಗೆ ಹೇಳಿರಲಿಲ್ಲ. ಈ ಸ್ಪರ್ಧೆಯಲ್ಲಿ ಭಾಗವಹಿಸಿದವರಲ್ಲಿ ಕವಿಯೂ ಒಬ್ಬ. ಅವರ ಕತೆಗಳ ಮೇಲೆ ಟೀಕೆ ಮಾಡುತ್ತಾ ವಿಮರ್ಶಕ ಶ್ಯಾಮನ ಕತೆಯ ಬಗ್ಗೆ ಈ ಮಾತು ಬರೆದಿದ್ದ. ''ಇವರ ಕತೆಯನ್ನೋದಿದರೆ ಇವರಿನ್ನೂ ಶೈಶವಾವಸ್ಥೆಯಲ್ಲಿರುವಂತೆ ಕಾಣುತ್ತದೆ. ಕತೆಗೆ ಬೇಕಾದ ಕಲ್ಪನೆ, ನೋಟ, ಅನುಭವವೊಂದೂ ಕಾಣುವುದಿಲ್ಲ. ಪ್ರೌಢಶಾಲೆಯ ಹುಡುಗ ಕೂಡ ಇದಕ್ಕಿಂತ ಉತ್ತಮವಾಗಿ ಬರೆಯಬಲ್ಲ'' ಎಂದಿತ್ತು ಟೀಕೆ. ಟೀಕೆಯೇನೋ ಬಹಳ ಕಟುವಾಗಿತ್ತು. ಈ ಸ್ಪರ್ಧೆಯಲ್ಲಿ ಕವಿಗೂ ಬಹುಮಾನ ಬಂದಿರಲಿಲ್ಲ. ಆದರೂ ಅವನ ಕತೆಯ ಚಳಕವನ್ನು ವಿಮರ್ಶಕ ಹೊಗಳಿದ್ದ. ಇದು ಶ್ಯಾಮನಿಗೆ ಸಹಿಸಲಿಲ್ಲ ತಾನು ಕವಿಗಿಂತಲೂ ಚಿಕ್ಕವನಾದಂತಾಯಿತಲ್ಲಾ ಎಂದು ಅವನಿಗೆ ವೈಯುರಿದಿತ್ತು. ಪತ್ರಿಕೆಯನ್ನೋದಿದವರು ಅವನನ್ನು ಅದರ ವಿಷಯ ಕೇಳಿರಬಹುದು. ಅದರಿಂದ ಅವನ ಹೊಟ್ಟೆಯ ಕಿಚ್ಚು ಭುಗಿಲ್ಲನೆದ್ದಿರಬೇಕು.

ಮತ್ತೊಂದು ಕಾರಣವೆಂದರೆ, ನನ್ನ ಕವಿಯ ಸ್ನೇಹ. ಶ್ಯಾಮನಿಗೆ ತನ್ನ ಗರ್ವದಲ್ಲಿ, ತಾನು ಉತ್ತಮ ನಟನೆನ್ನುವುದರಲ್ಲಿ ಉಳಿದವರೆಲ್ಲ ತನಗಿಂತ ಕೀಳೆನ್ನುವ ಭಾವನೆಯೊಂದಿತ್ತು. ನನ್ನ ಜತೆಯಲ್ಲಿ ಅವನು ಗೆಳೆತನ ಬೆಳೆಸಿದುದೇ ನನಗೆ ಆಶ್ಚರ್ಯವಾಗಿತ್ತು. ಆದರೆ ಈಗ ಯೋಚಿಸಿ ನೋಡಿದರೆ ಅದರಲ್ಲೇನೂ ಆಶ್ಚರ್ಯ ಕಾಣುವುದಿಲ್ಲ. ಅವನಿಗೆ ಯಾರಾದರೂ ಒಬ್ಬರು ತನ್ನನ್ನು ಸದಾ ಹೊಗಳುವವರು ಬೇಕಾಗಿತ್ತು. ತಾನೇನು ಮಾಡಿದರೂ ಅದು ಚೆನ್ನ, ತನ್ನ ಬಾಯಿಂದ ಉದುರಿದ ಮಾತೆಲ್ಲಾ ಮುತ್ತು

ಹವಳವೆಂದು ಮೆಚ್ಚಿಕೊಳ್ಳುವವರು ಬೇಕಾಗಿತ್ತು. ಅವನ ಮಾತೊಂದಕ್ಕೂ ಎದುರಾಡದೆ ಅವನ ನೆರಳಾಗಿರುವವರು ಬೇಕಾಗಿತ್ತು. ತಾನು ದೇವರಾಗಿ, ಪೂಜೆಮಾಡುವ ಭಕ್ತನ ಅವಶ್ಯಕತೆಯಿತ್ತು. ನಾನು ಅವನಿಗೆ ಸಿಕ್ಕಿದೆ. ಅವನಾಡಿದುದೇ ವೇದವಾಕ್ಯವೆಂದುಕೊಂಡಿದ್ದೆ. ಆದರೆ ಈಗ ಅದು ಸಡಿಲಗೊಳ್ಳುತ್ತಿತ್ತು. ಅವನ ನೆರಳಾಗಿ ಅವನನ್ನೇ ಅನುಸರಿಸುವ ಬದಲು ಅವನಿಗೆ ಸರಿಸಮನಾಗಿ ನಿಂತು ನನ್ನದೇ ಬೇರೆ ವ್ಯಕ್ತಿತ್ವವಿದೆಯೆಂದು ತೋರುತ್ತಿದ್ದೆ. ಅವನಿಗೆ ಬೇಕಾಗಿದ್ದುದು ಸಂಪೂರ್ಣಭಕ್ತಿ. ಈಗ ಅದು ದೊರಕುವುದಿಲ್ಲವೆಂದು ಅವನಿಗೆ ತಿಳಿದಿರಬೇಕು. ನನ್ನ ಪೂಜಾಬುದ್ಧಿ ಈಗ ಬರಿಯ ಮೆಚ್ಚುಗೆಗೆ ಇಳಿದಿತ್ತು. ಆ ಮೆಚ್ಚುಗೆಯಲ್ಲಿ ಕವಿಗೂ ಪಾಲು ಸಲ್ಲುತ್ತಿತ್ತು ಅದು ಶ್ಯಾಮನಿಗೆ ಸರಿತೋರಲಿಲ್ಲ. ಪೂಜೆಯ ಹವಿಸ್ಸೆಲ್ಲ ಸಂಪೂರ್ಣವಾಗಿ ತನಗೇಬೇಕೆನ್ನುವ ದೇವತೆಯಂತೆ ಅವನು ಬೆಂಕಿಯಾದ. ಹೆಂಡತಿಯು ಸಂಪೂರ್ಣಸೇವೆ ತನಗೇ ಸಲ್ಲಬೇಕೆಂದು ಬಯಸುವ ಗಂಡನಂತೆ ಕುಪಿತನಾದ. ಅದರ ಫಲವಾಗಿಯೇ ನನ್ನ ಕಡೆಗಿದ್ದ ಕಾವಿನ ಇಳಿತ· ಕವಿಯ ಮೇಲಿನ ಕೋಪದ ಉಬ್ಬರ! ಆದರೆ ತನ್ನನ್ನು ಪೂಜಿಸುವ ಭಕ್ತನೊಬ್ಬನಿಲ್ಲದಿದ್ದರೆ ಅವನ ಹಿರಿತನ ಉಳಿಯುವಂತಿರಲಿಲ್ಲ ಪೂಜಾರಿಯಿಲ್ಲದ ಗುಡಿ ಪಾಳುಬೀಳುವುದೆಂಬುದು ಅವನಿಗೂ ಗೊತ್ತು. ಅದಕ್ಕಾಗಿಯೇ ಈಗ ಬೇರೆಯವರ ಸಹವಾಸ ಬಯಸುತ್ತಿದ್ದ.

ನನಗೆ ಈ ಕತೆಯನ್ನೆಲ್ಲ ನೆನಸಿಕೊಳ್ಳುವಾಗ ಇನ್ನೂ ಒಂದು ತೋಚುತ್ತವೆ. ಲಲಿತೆಯಿಂದ, ಯಮುನೆಯಿಂದ ಅವನು ಮೆಚ್ಚುಗೆ ಬಯಸಿದ. ಕಲಾವಿದ ತಾನು. ಅವರನ್ನು ಮೆಚ್ಚುಗೆಯಿಂದ ಪ್ರೇಮಕ್ಕೆ ನಡೆಸುವುದೇನೂ ಕಷ್ಟವಾಗಿರಲಾರದೆಂದುಕೊಂಡಿದ್ದ. ಆದರೆ ಅವರ ಮೆಚ್ಚುಗೆ ಕವಿಯ ಕಡೆಗೂ ಹರಿದುದು ಅವನಿಗೆ ಸಹಿಸಲಿಲ್ಲ. ಅದರಿಂದಲೇ ಅವನು ಕವಿಯ ಮೇಲೆ ಅಪವಾದ ಹೊರಿಸಲು ಯತ್ನಿಸಿದ್ದೂ ಎಂದು ತೋರುತ್ತದೆ. ಇದೆಲ್ಲಾ ಈಗ, ಅದು ನಡೆದುಹೋದ ಹಲವು ವರ್ಷಗಳಾದ ಮೇಲೆ, ತೋರುತ್ತಿರುವುದು. ಆಗ ಇಷ್ಟೊಂದು ಸ್ಪಷ್ಟವಾಗಿ ನನಗೆ ತಿಳಿದಿರಲಿಲ್ಲ.

ಒಂದೆರಡು ದಿನವಾದಮೇಲೆ ಕಾಲೇಜಿನಲ್ಲಿ ವಾರ್ಷಿಕೋತ್ಸವಕ್ಕೆ

ಸಿದ್ಧತೆಗಳಾರಂಭವಾದುವು. ಈ ಬಾರಿ ಕವಿಯೂ ತನ್ನ ಆನಂದದಲ್ಲಿ ನಾಟಕದಲ್ಲಿ ಪಾತ್ರವಹಿಸಲು ಮುಂದಾದ. ನಾಟಕದ ಸಮಿತಿಯಲ್ಲಿ ಶ್ಯಾಮನೂ ಇದ್ದ. ಆದರೆ ಅವನು ಸಮಿತಿಯವರ ಮನಸ್ಸನ್ನು ಆಳುವಂತಿರಲಿಲ್ಲ. ಕವಿ ಓದಿ ತೋರಿದುದನ್ನು ಅಧ್ಯಾಪಕರು ಮೆಚ್ಚಿಕೊಂಡು ಅವನಿಗೆ ಮುಖ್ಯಪಾತ್ರವನ್ನು ಕೊಟ್ಟರು. ಶ್ಯಾಮ್ ಗೊಣಗುತ್ತಾ ಅವನ ಹೆಂಡತಿಯ ಪಾತ್ರ ವಹಿಸಬೇಕಾಯಿತು. ಒಂದು ವಾರದಲ್ಲೇ ವಾರ್ಷಿಕೋತ್ಸವವೂ ಆಯಿತು. ವಾರ್ಷಿಕೋತ್ಸವದಲ್ಲಿ ಆದ ನಾಟಕಗಳಲ್ಲಿ ಅವರ ನಾಟಕ ಚೆನ್ನಾಗಿತ್ತು. ಅವರ ನಾಟಕಕ್ಕಿಂತ ಇಂಗ್ಲಿಷ್ ನಾಟಕ ಚೆನ್ನಾಗಿತ್ತು. ಇವರ ನಾಟಕ ಅಷ್ಟು ಉನ್ನತ ಮಟ್ಟಕ್ಕೇರದಿರಲು ಕಾರಣ ಶಾಮ್! ಕವಿಯ ಮೇಲಿನ ಕರುಬಿನಿಂದ ಅವನು ತನ್ನ ಕಲೆಗೆ ಕಸ, ಕಿಲುಬು ಕಟ್ಟಿಸಿದ್ದ. ನಾಟಕ ನೋಡಿದ ಪ್ರತಿಯೊಬ್ಬರೂ ಕವಿಯನ್ನೇ ಹೊಗಳುತ್ತಿದ್ದರು. ಅವನ ಪಾತ್ರವನ್ನೇ ಎಲ್ಲರೂ ಹೊಗಳಿ ಪಿಸು ಮಾತಿನಲ್ಲೇ ಶ್ಯಾಮನನ್ನು ತೆಗಳುತ್ತಿದ್ದರು.

"ಶ್ಯಾಮ್? ಅವನ ಕಾಲ ಮುಗಿಯಿತು! ಕೆನ್ನೆಗೆಷ್ಟು ಬಣ್ಣ ಹಚ್ಚಿದರೂ ಗಂಡುಗೆನ್ನೆ ಗೊತ್ತಾಗುವುದಿಲ್ಲವೆ?"

"ಆ ನಡಿಗೆ—ಥೂ! ಅಧ್ವಾನ! ಯಾವ ಹೆಂಗಸೂ ಆ ತರಹ ನಡೆಯುವುದಿಲ್ಲ."

"ಆಗ ಕುರ್ಚಿಯಮೇಲೆ ಕೂತ ನೋಡು, ಕಾಲು ಪಡರಿಸಿಕೊಂಡು. ಎಲ್ಲರೂ 'ಗೊಳ್ಳಂತ' ನಕ್ಕರು ನೋಡು. ನನಗಂತೂ ಅಸಹ್ಯವಾಯಿತು. ಅವನು ಯಾರಯ್ಯ- *Hero* ಪಾತ್ರಮಾಡಿದನಲ್ಲಾ *Wonderful*"

"ಎಷ್ಟು *Realistic* (ಸಹಜ)ವಾಗಿತ್ತೋ! ಅವನು ನಾಟಕದ *Spirit* [ಸತ್ವ] ತಿಳಿದವನು. ಚೆನ್ನಾಗಿ *Express* (ತೋರಿದ) ಮಾಡಿದ. ಅವನೊಬ್ಬ *actor* (ನಟ)"

ಇದು ಕೂಡ ಶ್ಯಾಮನ ಎದೆಗಿಚ್ಚನ್ನು ಹೆಚ್ಚಿಸಿತ್ತು.

ಪರೀಕ್ಷೆ ಹತ್ತಿರ ಬಂದಂತೆ ಕಳೆದ ವರ್ಷದಂತೆ ನಾನು ಶ್ಯಾಮ್ ಇಬ್ಬರು ಜತೆಯಲ್ಲಿ ಓದಲಿಲ್ಲ. ನಾನು ಎಷ್ಟೇಹೇಳಿದರೂ ಅವನು ನನ್ನ ಜತೆಗೆ ಓದಲು ಬರುತ್ತಿರಲಿಲ್ಲ. ಹೊಸ ಸ್ನೇಹಿತರೊಂದಿಗೆ ಹೊರಟು

ಹೋಗುತ್ತಿದ್ದ. ನನಗೆ ಮಾತ್ರ ಅವನಲ್ಲಿದ್ದ ಪ್ರೀತಿ, ವಿಶ್ವಾಸ ತಗ್ಗಿರಲಿಲ್ಲ. ನಾನೇ ಏನೋ ತಪ್ಪು ಮಾಡಿದೇನೆಂದುಕೊಂಡು ಪದೇ ಪದೇ ಅವನ ಹತ್ತಿರ ಹೋಗುತ್ತಿದ್ದೆ. ಈಗ ಹೇಳಿಕೊಳ್ಳಲು ನಾಚಿಕೆಯಾಗುತ್ತದೆ. ನಾಯಿ ತನ್ನ ಯಜಮಾನನ ಹತ್ತಿರ ಬಾಲ ಮುದುರಿಕೊಂಡು ಹೋಗುವಂತೆ ದೈನ್ಯತೆಯಿಂದ ಶ್ಯಾಮನ ಬಳಿಗೆ ಹೋಗುತ್ತಿದ್ದೆ. ಒಂದೊಂದು ಬಾರಿ ವಿಶ್ವಾಸ ತೋರಿಸುತ್ತಿದ್ದ. ಹಳೆಯ ರೀತಿಯಲ್ಲೇ ಬಹಳ ಆಸ್ತತೆಯಿಂದ ತೋರುತ್ತಿದ್ದ. ನಡೆದು ಕೊಳ್ಳುತ್ತಿದ್ದ. ಒಂದು ಬಾರಿ ಸೆಟೆದು ನಿಂತು, ತಾನು ದುರ್ಭೇದ್ಯವಾದ ವನೆನ್ನುವಂತೆ ತಾತ್ಸಾರದಿಂದ ನಡೆದುಕೊಳ್ಳುತ್ತಿದ್ದ. ನಾನು ಅದನ್ನೆಲ್ಲವನ್ನೂ ಸಹಿಸಿಕೊಂಡಿದ್ದುದೇ ಆಶ್ಚರ್ಯ ಅವನು ನನ್ನನ್ನು ಯಾವುದೇ ರೀತಿಯಲ್ಲಿ ನೋಡಿದರೂ, ನಡೆಸಿದರೂ ನಾನು ಮಾತ್ರ ಅವನಂದಂತೆಯೇ ನಡೆಯುತ್ತಿದ್ದೆ. ಅವನಲ್ಲಿದ್ದ ನನ್ನ ಪ್ರೀತಿ ಅಷ್ಟು ಬಲವಾಗಿತ್ತು! ಈಗ ಕೂಡ ನನಗೆ ಅವನಲ್ಲಿ ಹಳೆಯ ಪ್ರೀತಿಯೇ ಇನ್ನೂ ಇದೆ. ಅದು ಇನ್ನೂ ತಗ್ಗಲಿಲ್ಲ! ಎಂದಮೇಲೆ ಆಗ ಇನ್ನೆಷ್ಟಿರಬೇಕು. ಅವನು ನನ್ನ ಈ ಪ್ರೀತಿಯನ್ನು ದುರುಪಯೋಗ ಪಡಿಸಿಕೊಳ್ಳಲು ಪ್ರಯತ್ನಿಸಿದ. ದುರುಪಯೋಗಪಡಿಸಿಕೊಂಡ.

ನನಗೆ ಅವನು ಕೊಂಚ ವಿಶ್ವಾಸ ತೋರಿಸಿದರೂ ಸಾಕಾಗಿತ್ತು. ಅವನು ಪರೀಕ್ಷೆಗೆ ಕೊಂಚ ದಿನ ಮೊದಲು ಇದ್ದಕ್ಕಿದಂತೆ ಈ ವಿಶ್ವಾಸ ತೋರಿಸ ಲಾರಂಭಿಸಿದ. ಅವನನು ನನ್ನಮೇಲೆ ಅದೆಂತಹ ಮೋಡಿಯಿತ್ತೋ ಏನೋ ಅವನು ಹೇಳಿದುದೆಲ್ಲವನ್ನೆಲ್ಲ ನಾನು ಒಪ್ಪುತ್ತಿದ್ದೆ. ಅವನಿಂದಲೇ ನಾನು ಕವಿಯೊಂದಿಗೆ ಜಗಳವಾಡಿದುದು. ಕವಿಯನ್ನು ಹೀನಾಮಾನವಾಗಿ ಬೈದುದು. ನನಗೆ ಇಷ್ಟವಿಲ್ಲದಿದ್ದರೂ ಅವನು ನನ್ನಮೇಲೆ ಬೀರುತ್ತಿದ್ದ ಪ್ರಚಂಡ ಪ್ರಭಾವದಿಂದ ಇದು ನಡೆದುಹೋಯಿತು. ಕಾರಣವೇನಾದರೂ ಇದ್ದು ಕವಿಯೊಂದಿಗೆ ಜಗಳವಾಡಿದ್ದರೆ ಏನಾದರೂ ಅನ್ನಬಹುದು. ಅಕಾರಣವಾಗಿ ಕವಿಯನ್ನು ಬೈದು ಅವಮಾನಿಸಿದೆ. ಅದೂ ಶ್ಯಾಮನ ಪ್ರೇರಣೆಯಿಂದ.

ಆ ದಿನ ನನಗೆ ಚೆನ್ನಾಗಿ ನೆನಪಿದೆ. ಅದು ನೆನಪಿರಲು ಕಾರಣ, ಅದು ನಡೆದ ನಂತರ ನಡೆದ ಮತ್ತೊಂದು ಘಟನೆ. ಎರಡು ಮೂರು ದಿನದಿಂದ ಶ್ಯಾಮನ ಜತೆಯಲ್ಲಿ ಓಡಾಡುತ್ತಿದ್ದೆ. ಶ್ಯಾಮ್ ಒಂದೇಸಮನಾಗಿ

ಕವಿಯನ್ನು ತೆಗಳುತ್ತಿದ್ದ, ಹಾಸ್ಯಮಾಡುತ್ತಿದ್ದ. ಈ ಹಾಸ್ಯ ವಿಕಟ ನಗೆ, ತೆಗಳಿಕೆ ನನಗೆ ಮೊದಲ ದಿನ ಒಗ್ಗದಿದ್ದರೂ ಅವನ ಜತೆಗೋಸ್ಕರ ಸಹಿಸಿ ಕೊಳ್ಳುತ್ತಿದ್ದೆ. ಆದರೆ ಅದು ಪದೇ ಪದೇ ಅವನ ಬಾಯಿಂದ ಬರಲು ನನಗೆ ಕೊಂಚ ಅನುಮಾನವಾಯಿತು. ಶ್ಯಾಮ್ ಹೇಳುತ್ತಿರುವುದು ನಿಜವಿದ್ದರೂ ಇರಬಹುದೆನ್ನಿಸಿತು. ಕವಿ ಆ ದಿನ ಸಂಜೆ ಕಾಲೇಜು ಮುಗಿದ ನಂತರ ನನ್ನ ಕೋಣೆಗೆ ಬಂದ. ಎಂದಿನಂತೆಯೇ ಒಂದೇಸಮನಾಗಿ ಹೀಗಿಂದಹಾಗೆ ಓಡಾಡುತ್ತಿದ್ದ. ಚಡಪಡಿಸುತ್ತಿದ್ದ. ನನಗೆ ಯಾಕೋ ಮನಸ್ಸಿಗೆ ಅಸಮಾಧಾನ. ಈ ಸಮಯದಲ್ಲಿ ಕವಿ ಬೇರೆ ಬಂದನಲ್ಲಾ ಎನ್ನಿಸಿತು. ಎಂದೂ ಇಲ್ಲದುದು ಆವತ್ತು ಇದೊಂದು ಪೀಡೆ, ಬೆನ್ನು ಹತ್ತಿದ ಬೇತಾಳ ಎನ್ನಿಸಿತು. ಆದರೆ ಈ ಅಸಮಾಧಾನವನ್ನು ಬಾಯಿಬಿಟ್ಟು ಹೇಳುವಂತಿರಲಿಲ್ಲ. ಆದುದರಿಂದ ಸುಮ್ಮನಿದ್ದೆ.

ಕಿಟಕಿಯ ಹತ್ತಿರನಿಂತ ಕವಿಯ ಕೆನ್ನೆಯಮೇಲೆ ಕೆಂಗಿರಣವೊಂದು ಬಿದ್ದು ಅದು ಹೊಳೆಯುತ್ತಿತ್ತು. ಕಣ್ಣು ಅಂದಿನಷ್ಟು ಪ್ರಖರವಾಗಿ ಮತ್ತೆಂದೂ ಹೊಳೆಯಲಿಲ್ಲ.

" ಸೀನು, ನನ್ನ ಕಾದಂಬರಿ, 'ಮೂರುಮೊಗ್ಗು' ಪ್ರಕಟವಾಗುತ್ತಿದೆ. ಪ್ರಕಾಶಕರು ಅದನ್ನು ಪ್ರಕಟಿಸಲು ಒಪ್ಪಿದ್ದಾರೆ. ನನಗೆ ಇನ್ನೂರು ರೂಪಾಯಿ ಕೊಡುವರಂತೆ.

ನನಗೆ ಅಸಮಾಧಾನದಲ್ಲೂ ಕೊಂಚ ಸಂತೋಷವೇ ಆಯಿತು. ಆದರೆ ಹೇಳಲಾರದ ಅಸಮಾಧಾನ ಹಿಂದೆಯೇ ಅಡಗಿಕೊಂಡಿತ್ತು. ಅದರಿಂದಲೇ ನಾನೇನೂ ಮಾತನಾಡಲಿಲ್ಲ.

' ನೋಡಿ, ಸೀನು, ಇದೊಂದು ಹೊಸಪದ್ಯ ಬರೆದಿದೇನೆ. ನೀವು ಓದಿನೋಡಿ. ನಿಮ್ಮ *Cusin* ಲಲಿತಾ ಅವರಿಗೂ ತೋರಿಸಿ, ಹೇಗಿದೆ ಕೇಳಿ. ಅವರೇನೆಂದರೆನ್ನುವುದನ್ನು ಹೇಳಿ. ಎಷ್ಟಿದ್ದರೂ ಹೆಂಗಸರು ನಮಗಿಂತಲೂ ಈ ವಿಷಯಗಳಲ್ಲಿ ಹೆಚ್ಚು ಪರಿಣತರು.

ಇದುವರೆಗೂ ಅಡಗಿದ್ದ ಅಸಮಾಧಾನ ಈಗ ಕೋಪವಾಯಿತು. ಯಾವುದೋ ವಿಷನಿಮಿಷ, ಬರಕೂಡದ ಗಳಿಗೆ ಬಂದಿತು. ಲಲಿತೆಯ ಮಾತೆತ್ತಿದುದು ನನಗೆ ಸಹಿಸದಾಗಿ ಅವನ ಮೇಲೆ ತಿರುಗಿಬಿದ್ದೆ. ನನ್ನ

ಲಲಿತೆಯ ವಿಷಯ ಮಾತಾಡಲು ಅವನಿಗೇನು ಹಕ್ಕು. ಪ್ರೇಮಯೆನ್ನುವ ಸೋಗಿನಲ್ಲಿ ಕಂಡಕಂಡ ಹೆಣ್ಣುಗಳಮೇಲೆ ಕಣ್ಣುಹಾಕುವ ಕಾಮಿಯೆಂದಲ್ಲಾ ಅವನನ್ನು ಬೈದೆ. ಅವನ ಮುಖದಲ್ಲಿದ್ದ ರಕ್ತವೆಲ್ಲಾ ಓಡಿಹೋಗಿ ಮುಖ ಬಿಳಿಚಿಕೊಂಡಿತು. ನಾಲಿಗೆಯಿಂದ ಮಾತೇ ಹೊರಡಲಿಲ್ಲ. ತಲೆತಗ್ಗಿ ಕಣ್ಣಿನಲ್ಲಿ ನೀರುತುಂಬಿ ಕೆಳಗಿಳಿಯಿತು. ನನ್ನ ಈ ಬಗೆಯ ಬೈಗಳು ಅವನು ನಿರೀಕ್ಷಿಸಿರಲಿಲ್ಲ. ಕತ್ತಲಲ್ಲಿ ಬಿದ್ದಗಾಯ ಹಗಲಲ್ಲಿ ಬಿದ್ದುದಕ್ಕಿಂತ ತೀವ್ರವಾಗುವಂತೆ, ಎಣಿಸದೆ ಬೀಳುವ ಪೆಟ್ಟು ಅವನನ್ನು ಅವಾಕ್ಕಾಗಿಸಿತು. ಭೂತಬಡಿದವನಂತೆ ನಾನೂ ಮನಸ್ವೀ ಬೈದೆ. ಸಿಕ್ಕಿದಂತೆಲ್ಲಾ ಬೈದು ಮನಸ್ಸಿನಲ್ಲಿ ಶ್ಯಾಮ್ ತುಂಬಿದ್ದ ವಿಷವನ್ನೆಲ್ಲಾ ಕಾರಿದೆ. ಆ ಕೋಪದ ಉದ್ವೇಗದಿಂದ ನನ್ನ ಮನಸ್ಸಿನ ಶಕ್ತಿಯೆಲ್ಲಾ ತಗ್ಗಿಕೊನೆಗೆ ಸುಸ್ತಾದೆ. ಅವನು ಉತ್ತರಕೊಡದೆ ಅಲ್ಲಿಂದ ಹೊರಟುಹೋದ. ಅವನ ಕವಿತೆಯ ಪ್ರತಿ ಅಲ್ಲಿಯೇ ಬಿದ್ದಿತ್ತು. ಅವನು ಹೊರಗೆ ಹೊರಟುಹೋದಮೇಲೆ ನನ್ನ ಸತ್ವವೆಲ್ಲಾ ಹೋದಂತಾಗಿ ನಾನು ಕುರ್ಚಿಯಮೇಲೆ ಕುಳಿತೆ. ನಾನು ಮಾಡಿದುದು ಸರಿಯೇ? ತಪ್ಪೇ? ನಾನೀಗ ಏನು ಮಾಡುತ್ತಿದ್ದೇನೆನ್ನುವ ಪರಿವೆಯೇ ಉಳಿಯಲಿಲ್ಲ. ಎಷ್ಟೋ ಹೊತ್ತು ಹಾಗೆಯೇ ಕುಳಿತಿದ್ದೆ. ಕತ್ತಲು ಮೆಲ್ಲನೆಬಂದು ಎಲ್ಲ ಬಣ್ಣಗಳ ಕುಣಿತವನ್ನು ತನ್ನಲ್ಲಿ ಕರಗಿಸಿ ಮುಳುಗಿಸಿ ಕೊಂಡಿತ್ತು. ಹೊರಗೆ ದೀಪಗಳನ್ನು ಹಚ್ಚಿದ್ದುದು ಕಾಣಿಸುತ್ತಿತ್ತು. ನನ್ನ ಕೋಣೆಯಲ್ಲಿ ಮಾತ್ರ ಕತ್ತಲು ಪೂರ್ಣವಾಗಿ ತುಂಬಿತ್ತು.

ಹಾಗೆಯೇ ಅದೆಷ್ಟುಹೊತ್ತು ಕುಳಿತಿದ್ದೆನೋ ಏನೋ! ಮೆಲ್ಲನೆ ಮನಸ್ಸಿಗೆ ನಾನು ಮಾಡಿದುದು ನೆನಪಿಗೆ ಬರಲಾರಂಭಿಸಿತು. ತಲೆ ಒಡೆತ ವಾರಂಭವಾಗಿ ನಾನಂದುದು, ಆಡಿದುದೆಲ್ಲ ನೆನಪಾಯಿತು. ನೆನಪಾದಂತೆ ಕವಿಯನೋವೂ ಕಣ್ಣುಮುಂದೆ ಬಂದು ನಿಂತಿತು! ಅಯ್ಯೋ! ಎಂತಹ ಕೆಲಸಮಾಡಿಬಿಟ್ಟೆ! ಹಾಗೆ ನಾನು ಅವನನ್ನು ಬಯ್ಯಬಾರದಾಗಿತ್ತು. ಅವನಾದರೂ ಏನು ತಪ್ಪುಮಾಡಿದ ಎಂದು ನನ್ನ ಮನಸ್ಸು ಚುಚ್ಚಲಾ ರಂಭಿಸಿತು. ಪಶ್ಚಾತ್ತಾಪದಿಂದ ನನ್ನ ಹೃದಯ ಕುದಿಯುತ್ತಿತ್ತು. ಮಾಡ ಬಾರದುದನ್ನು ಮಾಡಿದೆನೆನ್ನುವ ಮಹಾಭಾರ ನನ್ನ ಹೃದಯದಲ್ಲಿ ಕೂತಿತು. ಎದುರಿಗೆ ನೆಲದಮೇಲೆ ಬಿದ್ದಿದ್ದ ಅವನ ಗೀತದ ಪ್ರತಿಯೂ ಕಣ್ಣಿಗೆ ಬಿತ್ತು.

ಅವನನ್ನು ಹೋಗಿ ಕ್ಷಮೆ ಬೇಡಲೆ ಎಂದೂ ಒಮ್ಮೆ ಎನ್ನಿಸಿತು. ಆ ಗೀತದ ಪ್ರತಿಯಿದ್ದ ಕಾಗದಕ್ಕೆ ಈಗ ನನ್ನ ಕಣ್ಣಿನಲ್ಲಿ ಅಪಾರ ಬೆಲೆಯಿತ್ತು. ಅದನ್ನು ಮೆಲ್ಲನೆ ಕೈಗೆತ್ತಿಕೊಂಡು ಓದಿದೆ, ಓದುತ್ತಿದಂತೆ ನನಗೆ ದುಃಖ ಮುರುಕಳಿಸಿತು. ಅವನು ಎಷ್ಟುನಿಜವಾದ ಪ್ರೇಮಿ, ಎಷ್ಟು ನಿಶ್ಚಲವಾದುದು ಅವನ ಪ್ರೀತಿಯೆಂಬುದು ತಿಳಿಯಿತು. ಆ ಕವಿತೆಯನ್ನು ನಾನು ಇನ್ನೂ ನನ್ನ ಬಳಿಯಲ್ಲಿಯೇ ಇಟ್ಟುಕೊಂಡಿದ್ದೇನೆ, ಅವನ ನೆನಪಿಗಾಗಿ, ಅಂದಿನ ನೆನಪಿಗಾಗಿ. ತನ್ನ ಪ್ರೇಯಸಿಯನ್ನು ಚಂದ್ರನಿಗೆ ಹೋಲಿಸುತ್ತಾ ಒಂದು ಸುಂದರವಾದ ಕತೆಯನ್ನು ಹೆಣೆದುಬಿಟ್ಟಿದ್ದ ಆ ಕವಿತೆಯ ಲಾಲಿತ್ಯ ಆದರ ಕಲ್ಪನೆ ಆಗ ನನ್ನ ದೃಷ್ಟಿಯಲ್ಲಿ ಅತಿಶ್ರೇಷ್ಠವಾಗಿ ತೋರಿತು. ಈಗಲೂ ಆ ಕವಿತೆಯನ್ನು ನಾನು ಓದುವಾಗ ನನಗೆ ಆ ದಿನದ ನೆನಪಾಗಿ ಅದಕ್ಕೆ ಬೇರೆಯೇ ಒಂದು ಬೆಲೆ ಬಂದುಬಿಡುತ್ತದೆ.

ಅಲ್ಲಿಂದ ನೇರವಾಗಿ ಎದ್ದು ಅವನನ್ನು ಕ್ಷಮೆಬೇಡಲೇ ಎಂದುಕೊಂಡೆ. ಆದರೆ ಮನಸ್ಸಿನ ಉದ್ವೇಗದಿಂದ ಬಹಳ ಆಯಾಸವಾಗಿತ್ತು. ಹತ್ತು ಹದಿನೈದು ನಿಮಿಷವಾದರೂ ಹಾಗೆಯೇ ಕುಳಿತು ಅನಂತರ ಹೋಗಬೇಕೆಂದುಕೊಂಡೆ. ಹಾಗೆಯೇ ದೀಪವನ್ನಾರಿಸಿ ಹಾಸಿಗೆಯ ಮೇಲೆ ಮಲಗಿದೆ. ಯಾವ ಕ್ಷಣದಲ್ಲಿಯೋ ನನಗೆ ಅರಿವಿಲ್ಲದೆಯೇ ನಿದ್ರೆ ನನ್ನನ್ನಾವರಿಸಿತ್ತು.

ಮರುದಿನವೆಲ್ಲಾ ಕಾಲೇಜಿನಲ್ಲಿ ಕವಿಯನ್ನು ಹುಡುಕಿದೆ. ಕವಿಯೆಲ್ಲೂ ಕಾಣಲಿಲ್ಲ. ಅವನ ಸಹಪಾಠಿಗಳನ್ನು ವಿಚಾರಿಸಿದೆ. ಕಾಲೇಜಿಗೆ ಬಂದಿಲ್ಲವೆಂದು ಗೊತ್ತಾಯಿತು. ರಾತ್ರಿಯೇ ಹೋಗಿ ಕ್ಷಮೆ ಬೇಡಿಕೊಂಡಿದ್ದರೆ ಚೆನ್ನಾಗಿತ್ತೆಂದು ನನಗನ್ನಿಸಿತು. ಆದರೆ ಈಗಲೂ ಅವರ ಮನೆಗೆಹೋಗಿ ಕ್ಷಮೆಬೇಡಿದರಾದೀತೆಂದೂ ತೋಚಿತು. ಶ್ಯಾಮ್ ಮೊದಲನೆಯ ಪಿರಿಯಡಾದಮೇಲೆ ಬಂದ. ಅವನ ಮುಖದಲ್ಲೆಲ್ಲೂ ಇಲ್ಲದ ಶ್ರೀ ಮದ್ಗಾಂಭೀರ್ಯವಿತ್ತು. ಎಂದೂ ಇಲ್ಲದುದು ಆ ಕ್ಷಣದಲ್ಲಿ ನನಗೆ ಅವನಮೇಲೆ ಕೋಪವುಕ್ಕಿತು. ಒಂದೇ ಸಮಯದಲ್ಲಿ ಪ್ರೀತಿ, ದ್ವೇಷಗಳೆರಡೂ! ಅವನನ್ನು ಕಂಡು ಹೆದರಿಕೆಯೂ ಆಯಿತು. ಹಾವಿನ ಸುಂದರವಾದ ಹೆಡೆಯ ತೂಗಾಟದ ಸೊಗಸು ನಮ್ಮನ್ನು ಮೋಡಿಗೊಳಿಸಿದರೂ, ಅದರ ವಿಷಕ್ಕೆ ಹೆದರುವಂತೆ ಶ್ಯಾಮನನ್ನು ಕಂಡು ನಾನು ಹೆದರಿದೆ. ನನ್ನ ನೋಟದಲ್ಲಿ ಆ ಹೆದರಿಕೆ ಕಾಣಿಸಿತೋ ಏನೋ! ಶ್ಯಾಮ್ ನನ್ನ ಕಡೆಗೆ ದೃಷ್ಟಿಯನ್ನೂ ಎಸೆಯದೆ ತನ್ನ ಜಾಗದಲ್ಲಿ ತಾನು ಕುಳಿತ. ನನ್ನ ಹೃದಯ ನೋವಿನಿಂದ ಕಳಿತು ಹಣ್ಣಾಗುತ್ತಿತ್ತು.

ಕವಿ ಊರಿನಲ್ಲಿಲ್ಲವೆಂದು ತಿಳಿಯಿತು. ಅವನು ಬಂದಕೂಡಲೇ ಅವನನ್ನು ನೋಡಬೇಕೆಂದು ತೀರ್ಮಾನಿಸಿದೆ. ಆ ದಿನವೆಲ್ಲಾ ಶ್ಯಾಮನ ಹತ್ತಿರ ಕೂಡ ಸುಳಿಯಲಿಲ್ಲ. ಅವನನ್ನು ಕಂಡರೆ ನನಗೆ ಅಷ್ಟು ಹೆದರಿಕೆ. ಸಂಜೆಗೆ ನನ್ನ ದುಃಖವನ್ನೆಲ್ಲಾ ಲಲಿತೆಯ ಹತ್ತಿರದಲ್ಲಾದರೂ ತೋಡಿಕೊಳ್ಳೋಣವೆಂದರೆ ಲಲಿತೆಯೂ ಸಿಗಲಿಲ್ಲ. ಹಿಂದಿನ ರಾತ್ರಿ ಬಾರದಿದ್ದ ಚಿಂತೆಯೆಲ್ಲಾ ಇಂದು ಒತ್ತಿ ಒತ್ತಿ ಬರುತ್ತಿತ್ತು. ಹಾಸಿಗೆಯಲ್ಲಿ ಬೆಳಗಿನವರೆಗೂ ಒಂದೇಸಮನಾಗಿ ಹೊರಳಾಡಿದೆ. ಬೆಳಗಿನ ಜಾವದ ತಂಗಾಳಿ ಬೀಸಿದಾಗ ಕೊಂಚ ನಿದ್ರೆ ಹತ್ತಿದಹಾಗಾಯಿತು. ಅಲ್ಲಿಯತನಕ ಒಂದು ನಿಮಿಷ ಕೂಡ ಕಣ್ಣು ಮುಚ್ಚುವುದಾಗಲಿಲ್ಲ.

ಇದಾದ ಎರಡನೆಯ ದಿನವೇ ಕಾಲೇಜಿನ ಕೊನೆಯದಿನ. ಅನಂತರ ಕಾಲೇಜಿಗೆ ರಜಾ. ಪರೀಕ್ಷೆಗೆ ಓದಿಕೊಳ್ಳಲೆಂದು ಹದಿನೈದು ದಿನಗಳು

ರಜಾ ಕೊಟ್ಟಿದ್ದರು. ಕೊನೆಯ ದಿನ ನಾವೆಲ್ಲಾ ಸೇರಿಕೊಂಡು ಸಂಜೆಗೆ ಸಂತೋಷಕೂಟ ನಡೆಸುವ ತೀರ್ಮಾನ ಮಾಡಿದ್ದೆವು. ನಾನೂ ಸಂತೋಷ ಕೂಟಕ್ಕೆ ಹೋಗಿದ್ದೆ. ಅಲ್ಲಿ ಎಲ್ಲರೂ ಹಿಗ್ಗಿನಿಂದ ಕುಣಿಯುತ್ತಿದ್ದರು. ಮೊದಲು ಮೊದಲು ನನಗೆ ಈ ಹಿಗ್ಗಿನಲ್ಲಿ ಸೇರಿಕೊಳ್ಳಲಾಗಲಿಲ್ಲ. ಆದರೆ ಕೊಂಚಕೊಂಚವಾಗಿ ನನ್ನ ಯೋಚನೆಯೆಲ್ಲಾ ಮರೆವಾಗಿ ಉಳಿದವ ರೊಂದಿಗೆ ನಾನೂ ಹಿಗ್ಗಿನಲ್ಲಿ ಕೂಡಿಕೊಂಡೆ. ಆದರೆ ಅವರ ಕಾದಾಟ, ರಂಬಾಟ, ರಂಪಗಳು ನನಗೆ ಸರಿದೋರಲಿಲ್ಲ. ನಗಲು ಕೂಡ ನನ್ನಿಂದ ಆಗುತ್ತಿರಲಿಲ್ಲ. ಆಗ ಇದ್ದಕ್ಕಿದ್ದಂತೆ ಕಾಲೇಜಿನ ಆಕಡೆಯಿಂದ ಕವಿ ನಡೆದುಹೋದಂತೆ ತೋರಿತು. ಬಹಳ ಆಯಾಸಗೊಂಡವನಂತೆ, ತಲೆ ತಗ್ಗಿಸಿ ನಡೆಯುತ್ತಿದ್ದಂತೆ ತೋರಿತು. ಅವನೇ ಹೌದೋ ಅಲ್ಲವೋ ಎಂದು ಗುರುತು ಹಿಡಿಯುವುವರಲ್ಲೇ ಅವನು ಅಲ್ಲಿಂದ ಮಾಯವಾಗಿದ್ದ. ಅದೇ ತಾನೆ ನನ್ನಲ್ಲಿ ಮೂಡುತ್ತಿದ್ದ ಕೂಟದ ಹಿಗ್ಗು ಅದರಿಂದ ಮಾಯ ವಾಯಿತು. ಕವಿಯ ಯೋಚನೆಯೋ ಪದೇ ಪದೇ ಬರಲಾರಂಭವಾಯಿತು.

ಕಾದಂಬರಿಗಳಂತೆ ಜೀವನದಲ್ಲಿ ಎಲ್ಲವೂ ಲೆಕ್ಕ ಹಾಕಿದಂತೆ ನಡೆಯುವುದಿಲ್ಲ. ಏನೋ ಆಗುತ್ತದೆಂದು ನಾವು ಲೆಕ್ಕ ಹಾಕುತ್ತೇವೆ. ಮತ್ತಿನ್ನೇನೋ ಆಗಿಬಿಡುತ್ತದೆ. ಇದು ಏತಕ್ಕಾಯಿತೆಂದು ಕಾದಂಬರಿ ಗಳಂತೆ ಉತ್ತರ ಕೊಡಲೂ ಸಾಗುವುದಿಲ್ಲ. ಆದರಿಂದಲೇ ಕಾದಂಬರಿಗಳಲ್ಲಿ ಜೀವದ ಸಜೀವತೆ ಕಾಣುವುದಿಲ್ಲ. ಕಾದಂಬರಿಕಾರನ ಸೃಷ್ಟಿಯ ಜೀವವೇ ಹೊರತು ಅದು ನಿಜವಾದ ಜೀವವಲ್ಲವೆನಿಸುವುದು. ಯಾಕೆಂದರೆ ಜೀವನದಲ್ಲಿ ಆಗುವ, ಎಣಿಸದೆಯೇ ಜರುಗುವ ಸಂಗತಿಗಳು, ಸನ್ನಿವೇಶಗಳು, ವಿಷಮಗಳು, ದುರಂತಗಳು ಕಾದಂಬರಿಯಲ್ಲಿ ಸಹಜವಾಗಿ ಕಾಣಿಸುವುದಿಲ್ಲ

ಅಂತಹುದೊಂದು ದುರಂತ ಆಗ ನಡೆಯಿತು. ತನ್ನ ಕವಿತೆಯಲ್ಲಿ. ತನ್ನ ಮನಸ್ಸಿನಲ್ಲಿ ಬಯಸಿದ್ದ ಸಾವು ಕವಿಗೆ ಸಿಕ್ಕಿತ್ತು. ಸಂತೋಷ, ಕೂಟದಿಂದ ನಾನು ಮನೆಗೆ ಬಂದೊಡನೆಯೇ ದೀಪ ಹಾಕಿದೆ. ಕೋಣೆಯಲ್ಲಿ ಬಾಗಿಲ ಸಂದಿನಿಂದ ನನಗೊಂದು ಕಾಗದ ತುರುಕಿತ್ತು. ಅದನ್ನೆತ್ತಿ ಓದಿದೆ, ಕವಿಯ ಕಾಗದ. ತನ್ನನ್ನು ನಾನು ಅಪಾರ್ಥ ಮಾಡಿಕೊಂಡಿರುವೆನೆಂದೂ, ತನಗೆ ಯಾವ ಹೆಣ್ಣಿನಮೇಲೂ ಕಣ್ಣಿಲ್ಲವೆಂದೂ, ತನ್ನನ್ನು ಕ್ಷಮಿಸಬೇಕೆಂದೂ ಕೇಳಿಕೊಂಡಿದ್ದ.

"ನಾನು ಜೀವನದಲ್ಲಿ ಬಯಸಿದ್ದುದು ಎರಡು. ಪ್ರೇಮ, ವಿಶ್ವಾಸ. ನನಗೆ ಪ್ರೇಮಕ್ಕೆ ಸರಸಿ. ವಿಶ್ವಾಸಕ್ಕೆ ನೀವು ಗೆಳೆಯರು ಸಿಕ್ಕಿದಿರಿ ಎಂದು ಬಹಳ ಸಂತೋಷದಿಂದಿದ್ದೆ. ಸರಸಿಯ ಪ್ರೇಮವೇನೋ ನನ್ನದಾಯಿತು. ಆದರೆ ನಿಮ್ಮ ವಿಶ್ವಾಸ ನನ್ನದಾಗಲಿಲ್ಲ. ಗೆಳೆತನದ ಮರೀಚಿಕೆಯನ್ನು ಅರಸಿ ಅರಸಿ ಅದರಲ್ಲಿ ನನ್ನ ಏಕಾಂಗಿತನದ ನೋವನ್ನು ಪರಿಹರಿಸಿ ಕೊಳ್ಳುವೆನೆಂದು ಬಗೆದೆ, ನಿಮ್ಮಿಬ್ಬರ ಪರಿಚಯವಾದಾಗ, ಗೆಳೆತನ ಮರೀಚಿಕೆಯಲ್ಲ, ಅದು ಅಮೃತವಾಹಿನಿಯೆಂದುಕೊಂಡೆ. ಆದರೆ ಶ್ಯಾಮಸುಂದರ್‌ಗೆ ನನ್ನಮೇಲೆ ಅಸೂಯೆ ಬಂತು. ಅಸೂಯೆಪಡುವಂತಹ ಹೆಚ್ಚಳ ನನ್ನಲ್ಲಿ ಇಲ್ಲದಿದ್ದರೂ ಶ್ಯಾಮ್ ನನ್ನನ್ನು ದೂರವಿಟ್ಟರು. ತಿರಸ್ಕರಿಸಿದರು. ನೀವು ಕೂಡ ನನ್ನಮೇಲೆ ಇಲ್ಲದ ಸಲ್ಲದ ಆರೋಪ ಹೊರಿಸಿದಿರಿ. ಗೆಳೆತನ ಬರಿಯ ಆಲದ ಹೂವು. ಅದು ಇದುವರೆಗೂ ಸಿಕ್ಕಿಲ್ಲ. ಕೆಲವರು ಅದನ್ನು ಕಂಡೆವೆಂದು ಭ್ರಮೆ ಪಡುತ್ತಾರೆ. ಎಲ್ಲರೂ ಅದನ್ನು ಹುಡುಕಿಕೊಂಡು ಅರಸುತ್ತಾರೆ. ನಾನು ಹುಡುಕಿ, ಅರಸಿ, ಸಿಕ್ಕಿತೆಂದು ಭ್ರಮೆಪಟ್ಟೆ. ಆದರೆ ಅದು ಬರಿಯ ಕನಸೇ! ಆಲಕ್ಕೆ ಹೂವಿಲ್ಲ. ಗೆಳೆತನಕ್ಕೂ ಅಷ್ಟೆ. ಈ ಮಾತಿನಿಂದ ಕೋಪಗೊಳ್ಳಬೇಡಿ. ನಿಮಗಾದರೂ ಗೆಳೆತನ ಆಲದ ಹೂವಾಗದಿರಲಿ. ಮಲ್ಲಿಗೆಯ ಹೂವಾಗಲಿ. ನನ್ನನ್ನು ಕ್ಷಮಿಸಿ. ನಾನು ನಿಮಗೆ ತೊಂದರೆ ಕೊಟ್ಟುದನ್ನು ಕ್ಷಮಿಸಿ" ಎಂದು ಕಾಗದದಲ್ಲಿ ಬರೆದಿದ್ದ ಕವಿ. ನನಗೆ ಅದನ್ನೋದುವಾಗಲೇ ಹೃದಯ ಕರಗಿ ಕಣ್ಣೀರಾಯಿತು. ಆದರೆ ಮುಂದೆ ಓದಿದಂತೆ ನನಗೆ ದಿಕ್ಕೇ ತೋಚದಂತಾಯಿತು. ನಾನು ಓದಿದುದನ್ನು ನಾನೇ ನಂಬದಾದೆ. ಹೀಗೂ ಆಗುವುದೇ ಎಂದು ನನಗೆ ಅನ್ನಿಸಿತು.

ಕವಿ ನನ್ನ ಕೋಣೆಯಿಂದ ಮನೆಗೆ ಹೋಗುವ ವೇಳೆಗೆ ತಂತಿ ಬಂದಿತ್ತು-ಬೆಂಗಳೂರಿನಿಂದ. ಸರಸಿಗೆ ವಿಪರೀತ ಜ್ವರ. ಒಂದೇಸಮನಾಗಿ ಅವನನ್ನು ನೋಡಬೇಕೆಂದು ಚಡಪಡಿಸುತ್ತಿದ್ದಾಳೆಂದು ಕವಿಗೆ ಅದೊಂದು ದೊಡ್ಡಪೆಟ್ಟು. ಕೂಡಲೇ ರಾತ್ರಿಯ ರೈಲಿಗೇ ಬೆಂಗಳೂರಿಗೆ ಹೋದ. ಸರಸಿಗೆ ಏಳೆಂಟು ದಿನದಿಂದ ಜ್ವರ ಬಂದಿತ್ತು. ಮೊದಲು ಸಾಮಾನ್ಯ ಜ್ವರವೆಂದು ಸುಮ್ಮನಿದ್ದುಬಿಟ್ಟರು. ಕೊಂಚ ಬಿಸಿಕಾಫಿ ಕೊಟ್ಟರೆ

ಸಾಕೆಂದು ಸುಮ್ಮನಿದ್ದರು. ಆದರೆ ಮೂರನೆಯ ದಿನ ಜ್ವರ ಪಟ್ಟಾಗಿ ಮಲಗಿಸಿತು. ಅಂತಹುದರಲ್ಲಿಯೂ ಹಟಮಾಡಿಕೊಂಡು ಶಾಲೆಗೆ ಹೊರಟಳು. ದಾರಿಯಲ್ಲೇ ಸುಸ್ತಾಗಿ ಬವಳಿಬಂದು ಕುಸಿದಳು. ಅವಳ ಜತೆಗಾತಿಯರು ಗಾಡಿಮಾಡಿ ಮನೆಗೆ ಕರೆತಂದು ಬಿಟ್ಟರು. ಡಾಕ್ಟರು ಬಂದು ನೋಡಿ ಔಷಧಿಕೊಟ್ಟು ಹೋದ. ಅನಂತರ ಜ್ವರ ಟೈಫಾಯಿಡ್‌ಗೆ ತಿರುಗಿದೆಯೆಂದು ಹೇಳಿದ. ಆ ರಾತ್ರಿಯೆಲ್ಲಾ ಸರಸಿಗೆ ಜ್ಞಾನವೇ ತಪ್ಪಿದಂತಾಗಿ ಸುಮ್ಮನೇ ಕವಿಯನ್ನು ಕೂಗಿಕೊಳ್ಳುತ್ತಿದ್ದಳಂತೆ. ಮರುದಿನವೂ ಏನೂ ಪ್ರಯೋಜನವಾಗಲಿಲ್ಲ. ಜ್ವರವೂ ತಗ್ಗಲಿಲ್ಲ. ಆಗ ಕವಿಗೆ ತಂತಿಬಂದಿತ್ತು. ಕವಿ ಬಂದಮೇಲೂ ಸರಸಿಯ ಸ್ಥಿತಿಯೇನೋ ಉತ್ತಮಗೊಂಡಿರಲಿಲ್ಲ. ಮಧ್ಯಾಹ್ನದ ತನಕ ಒಂದೇ ಸಮ ಜ್ವರ ಕುದಿಯುತ್ತಿತ್ತು. ಮಧ್ಯಾಹ್ನ ಜ್ವರ ಇದ್ದಕ್ಕಿದ್ದಂತೆ ಇಳಿಯಿತು. ಡಾಕ್ಟರು ಬಂದು ನೋಡಿದರು. ಸರಸಿ ಸುಸ್ತಾದರೂ ಕವಿಯೊಂದಿಗೆ ನಗುತ್ತಾ ಮಾತಾಡಲು ಯತ್ನಿಸುತ್ತಿದ್ದಳು. ಜ್ವರ ಮರುಕಳಿಸದಿದ್ದರೆ ಸರಸಿ ಉಳಿದುಕೊಳ್ಳುವಳೆಂದು ಡಾಕ್ಟರು ಯೋಚಿಸಿದರು. ರಾತ್ರಿಯೆಲ್ಲಾ ಕವಿ ಸರಸಿಯ ಹಾಸಿಗೆಯ ಪಕ್ಕದಲ್ಲಿ ಕಾವಲು ಕಾದ. ಬೆಳಗಿನ ಜಾವದ ವೇಳೆಗೆ ಸರಸಿ ಬೆದರಿ ಚೀರಿದಳು. ಅದೇ ತಾನೇ ನಿದ್ರೆಯ ಜೊಂಪು ಹತ್ತಿದ್ದ ಕವಿ ಹತ್ತಿರ ಬಂದ. ಸರಸಿಗೆ ಜ್ವರ ಮರುಕಳಿಸಿ ಕುದಿಯುತ್ತಿತ್ತು. ಸರಸಿಯನ್ನು ತನ್ನ ಎದೆಯಮೇಲೊರಗಿಸಿಕೊಂಡು ಕುಳಿತ ಕವಿ. ಡಾಕ್ಟರನ್ನು ಕರೆತರಲು ತಂದೆ ಓಡಿದರು. ಸರಸಿಯ ಮೈ ಒಮ್ಮೆಗೆ ಸುಡುವಂತೆ ಬಿಸಿಯಾಗಿ ತಣ್ಣಗಾಯಿತು. ಕವಿಗೆ ಇದರಿಂದ ಹುಚ್ಚು ಹಿಡಿದಂತಾಗಿ, ಹೇಳದೆ ಕೇಳದೆ ಮರುಮಾತಾಡದೆ, ಸ್ಮಶಾನದಲ್ಲಿ ಸರಸಿ ಬೂದಿಯಾದೊಡನೆಯೇ ಮೈಸೂರಿಗೆ ಬಂದ. ಅಂದು ಸಂಜೆಯೇ ತನ್ನ ದುಃಖದಲ್ಲಿ ನನಗೆ ಕಾಗದ ಬರೆದಿದ್ದ. ಕವಿಯೆಷ್ಟು ದುಃಖಪಡುತ್ತಿರಬಹುದೋ ಎಂದುಕೊಂಡು ನನಗೆ ಬಹಳ ದುಃಖವಾಯಿತು. ಕೊನೆಗೊಮ್ಮೆ ಸುಖ ಸಿಕ್ಕಿತೆಂದುಕೊಂಡ ನನಗೆ ಅದರಲ್ಲಿಯೂ ವಂಚನೆಯಾಯಿತೇ ಎಂದು ಮನಸ್ಸು ಮಿಡುಕಿತು. ಕರುಳು ಅವನಿಗಾಗಿ ಮಿಡಿಯಿತು.

ಮರುದಿನ ಬೆಳಿಗ್ಗೆ ಕುಕ್ಕನಹಳ್ಳಿಯ ಕೆರೆಯ ಬಳಿಯ ವಿದ್ಯುತ್ ಕಂಬದ ಕೆಳಗೆ ಕವಿಯ ಶವ ಇದ್ದಿತು. ರಾತ್ರಿ ಕವಿ ತಂತಿಯನ್ನು ಮುಟ್ಟಿ

ಆತ್ಮಹತ್ಯ ಮಾಡಿಕೊಂಡಿದ್ದ. ಮೇಲಿನಿಂದ ಕೆಳಗೆ ಬಿದ್ದ ಏಟಿಗೆ ಮೈ ಕೈಯೆಲ್ಲಾ ಜಜ್ಜಿತ್ತು. ಆದರೆ ಆಶ್ಚರ್ಯವೆಂದರೆ ಆ ಮುಖ. ಆ ಮುಖದಲ್ಲಿ ನೋವು ಸ್ವಲ್ಪವೂ ಕಾಣುತ್ತಿರಲಿಲ್ಲ. ಶಾಂತಿ ಹೆಪ್ಪುಗಟ್ಟಿಕೊಂಡಿತ್ತು. ಸಾವಿನಲ್ಲಿ ಶಾಂತಿಪಡೆದ ಅವನ ಮುಖ ನನ್ನ ಕಣ್ಣಿಗೆ ಬಹಳ ಸುಂದರವಾಗಿ ಕಾಣಿಸಿತು. ತಾಯ ತೊಡೆಯಲ್ಲಿ ನಿರಾತಂಕವಾಗಿ ನಿದ್ರೆ ಮಾಡುವ ಹಸುಗೂಸಿನ ನಿಷ್ಕಳಂಕ ಮುಖದ ಸೌಂದರ್ಯ ಅವನ ಮುಖದಲ್ಲಿತ್ತು!

## ೧೩

ಕೃಷ್ಣಿಯ ಆತ್ಮಹತ್ಯದ ಬಗ್ಗೆ ನೂರುಜನ ನೂರು ಮಾತಾಡಿದರು. ವಿಚಿತ್ರ ವ್ಯಕ್ತಿ ಅವನೇನು ಮಾಡುವನೆಂದೇ ಹೇಳಲಾಗುತ್ತಿರಲಿಲ್ಲವೆಂದು ಕೆಲವರು ಆಡಿಕೊಂಡರು, ಮತ್ತೆ ಕೆಲವರು ಮರುಗಿದರು. ಇನ್ನೂ ಕೆಲವರು ಬಾಯಿ ಮಾತಿನಲ್ಲೇ ತಮ್ಮ ಸಹಾನುಭೂತಿ ತೋರಿಸಿದರು. ಅವನೆಂದಿದ್ದರೂ ಆತ್ಮಹತ್ಯ ಮಾಡಿಕೊಳ್ಳುವನೆಂದು ನನಗೆ ಗೊತ್ತಿತ್ತು. ಎಂದು ಶ್ಯಾಮ್ ತನ್ನ ಹೊಸ ಸ್ನೇಹಿತನೊಂದಿಗೆ ಹೇಳುತ್ತಿದ್ದುದು ನನಗೆ ಕೇಳಿಸಿತು.

ಈಗ ಶ್ಯಾಮ್ ನನ್ನನ್ನು ಪೂರ್ಣವಾಗಿ ಬಿಟ್ಟಂತೆಯೇ ಆಗಿಹೋಗಿತ್ತು. ಹೊಸ ಸ್ನೇಹಿತನೊಂದಿಗೇ ಯಾವಾಗಲೂ ತಿರುಗಾಡುತ್ತಿದ್ದ. ನನ್ನನ್ನು ಎದುರಿಗೆ ಕಂಡರೂ ಕಾಣದವನಂತೆ ಹೊರಟು ಹೋಗುತ್ತಿದ್ದ. ನನಗೆ ಇದು ಮುಳ್ಳು ಚುಚ್ಚಿದಂತೆ ಚುಚ್ಚುತ್ತಿತ್ತು. ಹೊಸ ಚಪ್ಪಲಿಯನ್ನು ಕೊಂಡವನು ಹಳೆಯದನ್ನೆಸೆದು ಬಿಡುವಂತೆ ಶ್ಯಾಮ್ ನನ್ನನ್ನು ದೂರಕ್ಕೆ ಎಸೆದಿದ್ದ. ನನ್ನಿಂದ ಅವನಿಗೆ ಇನ್ನೇನು ಪ್ರಯೋಜನವಿರಲಿಲ್ಲ. ಆದರೆ ನನ್ನ ಹೃದಯದಲ್ಲಿ ಮಾತ್ರ ಅವನಿಗೆ ಜಾಗವಿದ್ದೇ ಇತ್ತು. ಅವನಲ್ಲಿದ್ದ ಪ್ರೀತಿ ಇನ್ನೂ ನನ್ನ ಹೃದಯದಲ್ಲಿ ಉಳಿದಿತ್ತು. ಅವನು ಏನೇ ಅಂದಿರಲಿ ಏನೇ ಮಾಡಿರಲಿ, ನನ್ನ ಮನಸ್ಸಿನಲ್ಲಿದ್ದ ಈ ಪ್ರೀತಿ ಅಳಿಸುವಂತಿರಲಿಲ್ಲ. ಪರೀಕ್ಷೆಗಳೂ ಮುಗಿದುವು. ನಾನೇ ಅವನನ್ನು ಮಾತಾಡಿಸಲು ಪ್ರಯತ್ನಿಸಿದೆ. ಆದರೆ ನನ್ನ ಇರವನ್ನೇ ಎಣಿಸಲಿಲ್ಲ. ನಾನು ನಿಂತಿದ್ದರೂ ನಾನಿಲ್ಲವೆನ್ನುವಂತೆ ನನ್ನ ಮೂಲಕ ನೋಡಿಬಿಡುತ್ತಿದ್ದ. ನನ್ನ ಹೃದಯಕ್ಕೆ ಇದರಿಂದ ದೊಡ್ಡ ಬರೆ ಹಾಕಿದಂತಾಯಿತು. ಕವಿಯ ದುರಂತ ನನಗೆ ತಿಳಿಯದಂತೆಯೇ ನನ್ನನ್ನು ಬಹಳ ಕಲಕಿತ್ತು. ಅವನ ವಿಚಿತ್ರ—ಸಾಮಾನ್ಯವಲ್ಲದ ಬದುಕಿನಲ್ಲಿ ಏನೋ ಹಿರಿತನ, ಸತ್ವವಿತ್ತು. ಆ ಸತ್ವದ ಅಯಸ್ಕಾಂತ ನನ್ನನ್ನು ಸೆಳೆದುಕೊಂಡಿತ್ತು. ಈಗ ಕವಿಯಿಲ್ಲದುದು ನನಗೆ ಅರ್ಧ ಜೀವ ಹೋದಂತಾಗಿತ್ತು. ಏನೋ ಹೃದಯದಲ್ಲಿ ಕೊರತೆಯಾದಂತೆ ತೋರುತ್ತಿತ್ತು. ಶ್ಯಾಮ್ ಕೂಡ ನನ್ನಿಂದ ದೂರವಾದುದು ಇನ್ನೊಂದು ಬಲವಾದ ಏಟು ಬಿದ್ದಂತಾಯಿತು.

ಈಗ ನನ್ನ ವಿದ್ಯಾರ್ಥಿ ಜೀವನದ ಕತೆಯೆಲ್ಲಾ ನಡೆದು ಬಹಳ ದಿನವಾಗಿಬಿಟ್ಟಿದೆ. ಆ ದಿನಗಳನ್ನೆಲ್ಲಾ ನೆನೆದರೆ ಒಂದು ಕಡೆ ದುಃಖ. ಇನ್ನೊಂದು ಕಡೆ ಆಶ್ಚರ್ಯವಾಗುತ್ತದೆ. ಆಗ ನಾವು ಕಟ್ಟುತ್ತಿದ್ದ ಕನಸುಗಳೆಷ್ಟು. ಸೌಧಗಳಮೇಲೆ ಸೌಧಗಳನ್ನು ಏರಿಸುತ್ತಿದ್ದೆವು. ಜೀವನವೇ ಕನಸಾಗಿ ತೋರುವ ಬಿಸಿರಕ್ತದ ಕಲ್ಪನೆ ಆಗ. ಆದರೆ ಆಗ ನಾವೆಣಿಸಿದುದೇ ಒಂದು. ಆದುದೇ ಒಂದು. ನಾವು ಹಾಗೂ ಇದ್ದೆವೇ ಎಂದು ನಮಗೆ ಆಶ್ಚರ್ಯವಾಗುತ್ತದೆ ಒಂದೊಂದು ಸಲ.

ನಾನೀಕತೆ ಬರೆಯುವಂತೆ ನನ್ನ ಹೆಂಡತಿ ಮೈಥಿಲಿ ಓದುತ್ತಿದಾಳೆ. ನಮ್ಮ ಮಗು ತೊಟ್ಟಿಲಲ್ಲಿ ಮಲಗಿ ಶಾಂತವಾಗಿ ನಿದ್ರಿಸುತ್ತಿದೆ. ಅದಕ್ಕೆ ಯಾವುದೊಂದು ಯೋಚನೆಯೂ ಇಲ್ಲ. ಓದುತ್ತಾ ಓದುತ್ತಾ ಮೈಥಿಲಿ ನನ್ನನ್ನು ಕೇಳುತ್ತಾಳೆ—'' ನೀವು ಅಷ್ಟೊಂದು ಹುಚ್ಚುಹುಚ್ಚಾಗಿ ಆಡಿದಿರಾ?'' ಎಂದು. ಮೈಥಿಲಿಗೆ ತೋರುವಂತೆಯೇ ಬಹಳ ಜನಕ್ಕೆ ಇದು ಹುಚ್ಚುಹುಚ್ಚಾಗಿ ತೋರಬಹುದು. ಆದರೆ ನಡೆದುದು ನಡೆದಂತೆ ಹೇಳಲು ಮಾತ್ರ ನಾನು ಪ್ರಯತ್ನಿಸಿದೇನೆ. ನಾನು ಕಾದಂಬರಿಕಾರನಲ್ಲ. ಪಾತ್ರ ಪೋಷಣೆ, ಘಟನೆಯ ಹೆಣಿಗೆ ಒಂದೂ ನನಗೆ ತಿಳಿಯದು. ಬಹಳ ವರ್ಷಗಳ ಹಿಂದೆ, ನಾನು ನನ್ನ ಯೌವನದ ಹೊಸತರಲ್ಲಿ ನಡೆಸಿದ ಹುಚ್ಚಾಟವನ್ನು ನಡೆದಂತೆ ತಿಳಿಸಿದೇನೆ. ಇಷ್ಟಕ್ಕೂ ಈಗ ಅದು ಹುಚ್ಚಾಟವಾಗಿ ಕಾಣಬಹುದು. ಆದರೆ ಆಗ ಅದು ನನಗೆ ಸತ್ಯವಾಗಿತ್ತು. ಅದೇ ನಿಜವಾದ ಬಾಳ್ವೆಯಾಗಿತ್ತು. ನನ್ನನ್ನು ಮನುಷ್ಯನನ್ನಾಗಿಸಿದ ಅನುಭವವೇ ಅದು. ಯಮುನಾ ಈಗ ನಾಲ್ಕು ಮಕ್ಕಳ ತಾಯಿ. ಗಂಡ ಹೆಂಡತಿ ಚೊಕ್ಕಟವಾಗಿ ಸಂಸಾರ ಮಾಡಿಕೊಂಡಿದಾರೆ. ನಾನು ಪ್ರೇಮಿಸುತ್ತಿದ್ದೆನೆಂದು ಭ್ರಮಿಸಿದ್ದು, ಮದುವೆಯಾಗಬೇಕೆಂದಿದ್ದ ಲಲಿತಾ, ಮದುವೆಯೇ ಆಗದೆ ಉಳಿದಿದ್ದಾಳೆ. ಅವಳೊಂದು ಸಾಮಾಜಿಕ ಸಮಸ್ಯೆ ಯಾಗಿದಾಳೆ. ನಾನು ಮೈಥಿಲಿಯನ್ನು ಮದುವೆಯಾಗಿ ಈಗ ಇಲ್ಲಿದೇನೆ. ಶ್ಯಾಮ್ ಈಗ ಎಲ್ಲಿರುವನೋ ನನಗೆ ತಿಳಿಯದು. ಆದರೆ ಆಗ ನಾನು ಅವನನ್ನು ಕೊನೆಯಬಾರಿ ಕಂಡುದನ್ನು ನಾನೆಂದೂ ಮರೆಯಲಾರೆ.

ಆ ವರುಷ ಅವನಿಗೆ ಪರೀಕ್ಷೆಯಲ್ಲಿ ಪಾಸಾಗಲಿಲ್ಲ. ಅಂತೂ ಮೈಸೂರಿಗೆ ಅವನು ಹಿಂತಿರುಗಿ ಬರಲಿಲ್ಲ. ಆದರೆ ಅವನು ಮೈಸೂರಿನಿಂದ ಹೊರಟು ಹೋದ ದೃಶ್ಯ ನನಗಿನ್ನೂ ಕಣ್ಣಿಗೆ ಕಟ್ಟಿದಂತಿದೆ.

ಪರೀಕ್ಷೆ ಮುಗಿದು ಒಂದು ವಾರವಾಗಿತ್ತು. ನನಗೆ ಹೃದಯ ಕೊರೆಯುತ್ತಿತ್ತು. ಕವಿಯನ್ನು ಕಳೆದುಕೊಂಡ ತುಂಬು ದುಗುಡ ಒಂದು ಕಡೆ. ಈ ಕಡೆ ಶ್ಯಾಮುನ ಗೆಳೆತನದ ಕೊನೆಯಾದುದು. ಶ್ಯಾಮುನೆಂದರೆ ನನಗಿನ್ನೂ ಪ್ರೀತಿಯಿತ್ತು. ಆದಿನ ಬೆಳಿಗ್ಗೆ ಅವನು ರೈಲಿಗೆ ಹೋಗುವನೆಂದು ಹೇಗೋ ತಿಳಿಯಿತು. ರಾತ್ರಿಯೆಲ್ಲಾ ನನಗೆ ನಿದ್ರೆ ಬರಲಿಲ್ಲ. ಒಂದೇ ಸಮನಾಗಿ ನನಗೆ ಚಿಂತೆ. ಹೀಗಿಂದ ಹಾಗೆ ಹೊರಳಾಟ. ಹಾಗೂ ಹೀಗೂ ಬೆಳಗಿನ ಜಾವದ ಚಳಿಯಲ್ಲೇ ಎದ್ದು ರೈಲುನಿಲ್ದಾಣಕ್ಕೆ ಹೋದೆ.

ಮಂಜು ಬಿದ್ದು ಎಲ್ಲಾ ಬಿಳಿತೆರೆ ಹಾಕಿದಂತೆ ಕಾಣುತ್ತಿತ್ತು. ಒಳಗೆ ಹಾಸನದ ಕಡೆಗೆ ಹೋಗುವ ರೈಲು ಸಿದ್ಧವಾಗಿತ್ತು. ಗಾಡಿ ಗಾಡಿಯಲ್ಲೂ ಇಣುಕಿ ನೋಡಿದೆ. ಶ್ಯಾಮ್ ಎಲ್ಲೂ ಕಾಣಲಿಲ್ಲ. ಒಂದು ಬಗೆಯ ನಿರಾಸೆಯಾದರೂ, ಒಂದು ರೀತಿಯಲ್ಲಿ ಸಂತೋಷವಾಯಿತು. ಅಷ್ಟರಲ್ಲೇ ಶ್ಯಾಮ್ ಅವಸರವಾಗಿ ಬಂದ. ನಾನು ಅಲ್ಲಿ ನಿಂತುದನ್ನು ನೋಡಿದನೋ ಇಲ್ಲವೋ ತಿಳಿಯದು. ನಾನು ಮೆಲ್ಲಗೆ ಒಂದು ಕಂಬದ ಪಕ್ಕಕ್ಕೆ ನುಸುಳಿ ನಿಂತೆ. ರೈಲಿನಲ್ಲಿ ಇಂಟರ್ ಗಾಡಿಯಲ್ಲಿ ಕಿಟಕಿಯ ಪಕ್ಕದಲ್ಲಿ ಕುಳಿತು ಶ್ಯಾಮ್ ಹೀಗಿಂದ ಹಾಗೆ ಸುಮ್ಮನೆ ನೋಡುತ್ತಿದ್ದ. ಒಂದು ಬಾರಿ ಅವನ ದೃಷ್ಟಿ ನನ್ನ ಮೇಲೆ ಬಿದ್ದಂತಾಯಿತು. ನನಗೆ ಮೈ ಜಿಲ್ಲೆಂದಿತು. ಅವನ ಕಣ್ಣಿನಲ್ಲೂ ಮೃದುತೆ ಸುಳಿಯಿತೆಂದು ನನಗನ್ನಿಸಿತು. ಆದರೆ ಅದು ನನ್ನ ಭ್ರಮೆಯಿದ್ದರೂ ಇರಬಹುದು. ರೈಲು ಹೊರಡುವ ತನಕ ನಾನು ನಿಂತಲ್ಲಿಂದ ಕದಲಲಿಲ್ಲ. ಅವನು ಕುಳಿತಿದ್ದ ಗಾಡಿಯ ಕಡೆಗೇ ದಿಟ್ಟಿಸುತ್ತಿದ್ದೆ. ಅವನೂ ಒಂದು ಸಾರಿಯಾಗಲಿ ತನ್ನ ದೃಷ್ಟಿಯನ್ನು ಮತ್ತೆ ನನ್ನ ಕಡೆಗೆ ಎಸೆಯಲಿಲ್ಲ.

ರೈಲು ಹೊರಟಂತೆ ಕೊನೆಯಬಾರಿ ಅವನ ಕಡೆಗೆ ನೋಡಿದೆ. ಶ್ಯಾಮ್ ಒಂದುಬಾರಿ ನನ್ನ ಕಡೆಗೆ ನೋಡಿದ. ಕೈಯಾಡಿಸಿದ ಹಾಗೆ ನನಗೆ ತೋರಿತು. ನಾನೂ ನನ್ನ ಕರವಸ್ತ್ರವನ್ನಲ್ಲಾಡಿಸಿದೆ. ರೈಲು ವೇಗವಾಗಿ

ಮುಂದೆ ಮುಂದೆ ಹೋಗಿ ಮಂಜಿನತೆರೆಯಲ್ಲಿ ಮಾಯವಾಗುವವರೆಗೂ ಅಲ್ಲಿಯೇ ಹಾಗೆಯೇ ಕೈಯಾಡಿಸುತ್ತಾ ನಿಂತಿದ್ದೆ. ರೈಲು ಕಾಣದಂತಾದ ಎಷ್ಟೋಹೊತ್ತು ಅಲ್ಲಿಯೇ ನಿಂತಿದ್ದೆ. ಹಾಗೆಯೇ ನಿಂತಿದ್ದೆ. ಕಣ್ಣಿನಲ್ಲಿ ಹರಿಯುತ್ತಿದ್ದ ನೀರನ್ನೊರೆಸಿಕೊಳ್ಳುತ್ತಾ ನಿಲ್ದಾಣದಿಂದ ಹೊರಕ್ಕೆ ಬಂದೆ. ನನ್ನ ಹೃದಯ ಹಿಂದೆಂದೂ ಇಲ್ಲದಂತೆ ತುಂಬಿತ್ತು. ಗೆಳೆತನ ಅಳಿವ ಹೂವೆನ್ನುವ ಕವಿಯ ಮಾತು ನೆನಪಿಗೆ ಬಂತು. ಹೇಳಲಾರದಷ್ಟು, ತಡೆಯಲಾರದಷ್ಟು ನೋವು ಹೃದಯವನ್ನು ಹಿಂಡುತ್ತಿತ್ತು.

———

## ಶಾರದಾ ಸಾಹಿತ್ಯಮಾಲೆಯ ಪ್ರಕಟಣೆಗಳು

| | | | |
|---|---|---|---|
| ೧. | ಕಾರವಾನ್ * | ಲೇ:- | ಬಸವರಾಜ ಕಟ್ಟೀಮನಿ |
| ೨.೩. | ಸ್ವಾತಂತ್ರ್ಯದೆಡೆಗೆ | ,, | ಬಸವರಾಜ ಕಟ್ಟೀಮನಿ |
| ೪. | ಜೀವನ-ಕಲೆ | ,, | ಬಸವರಾಜ ಕಟ್ಟೀಮನಿ ಮತ್ತು ಜಿ. ಬಿ. ರಾಜ್ |
| ೫. | ಮುಗುಳುನಗೆ | ,, | 'ಜಿಬಿಜ್' |
| ೬. | ಸ್ವಪ್ನಸುಂದರಿ | ,, | 'ಚದುರಂಗ' |
| ೭-೮. | ಆಲದಹೂ | ,, | ಆನಂತನಾರಾಯಣ |

* ದ್ವಿತೀಯ ಮುದ್ರಣ ಸಿದ್ಧವಾಗುತ್ತಿದೆ.